ಶ್ರೀ

ಫಲಜ್ಯೋತಿಷ ಜ್ಯೋತಿರ್ಮಾಲಾ : ನಕ್ಷತ್ರ ಹದಿನೈದು

# ಕುಂಡಲಿ ಗುಣ ನಿರ್ಣಯ
# (EVALUATION OF HOROSCOPE)



ಲೇಖಕರು :

ಶ್ರೀ ಎನ್. ಕೆ. ಜೋಗಳೇಕರ



ತೇಜಸ್ವಿ ನಗರ, ಕಲಘಟಗಿ ರೋಡ,

ಧಾರವಾಡ-೧.

# ಅರ್ಪಣೆ

ದಾನಶೂರರೂ
ಸಾಹಿತ್ಯಾರಾಧಕರೂ
ಧಾರ್ಮಿಕ ಚಿಂತಕರೂ
ವಾಕ್‌ಪಟುಗಳೂ
ಸಮಾಜ ಸೇವಕರೂ
ವ್ಯಾಸಂಗ ಪ್ರಿಯರೂ
ಕಲಾಪ್ರೇಮಿಗಳೂ
ಜ್ಯೋತಿಷ್ಯ ಪ್ರೇಮಿಗಳೂ
ನನ್ನ ಆತ್ಮೀಯ ಮಿತ್ರರೂ ಆದ
ಹೋಟೇಲ ಉದ್ಯಮದಾರರಾದ
**ಶ್ರೀ ಕೆ. ಹರಿದಾಸ ಭಟ್ಟ**
ಇವರಿಗೆ
ಈ ನನ್ನ ಹದಿನೈದನೇ ಕೃತಿ "ಕುಂಡಲಿ ಗುಣ ನಿರ್ಣಯ"
ಇದು ಸಪ್ರೇಮದಿಂದ ಅರ್ಪಿತ

—ಎಸ್. ಕೆ. ಜೋಗಳೇಕರ

# ಆತ್ಮ ನಿವೇದನೆ

ಫಲ ಜ್ಯೋತಿಷ್ಯ ಶಾಸ್ತ್ರಕ್ಕೆ ಹದಿನಾಲ್ಕು ನಕ್ಷತ್ರಗಳನ್ನು ಸಮರ್ಪಿಸಿದ ನಂತರ ನನ್ನ ಹದಿನೈದನೇ ನಕ್ಷತ್ರದ ಶೋಧನೆಯ ಯೋಜನೆಗೆ ತೊಡಗಿದಾಗ ನನ್ನ ಬುದ್ಧಿಗೆ ತೋಚಿದ್ದೇನೆಂದರೆ, ವೃತ್ತಿ ಜ್ಯೋತಿಷಿಗಳ ವಿಶೇಷ ಮಾರ್ಗ ದರ್ಶನಕ್ಕಾಗಿಯೇ ಒಂದು ವಿಶಿಷ್ಟ ಕೃತಿಯನ್ನು ರಚಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ "**ಕುಂಡಲಿ ಗುಣ ನಿರ್ಣಯ**" ಕೃತಿ ರಚನೆಗ ಕೈ ಹಾಕಿದೆ.

ಈ "ಕುಂಡಲಿ ಗುಣ ನಿರ್ಣಯ"ವು ಒಂದು ಅತ್ಯಂತ ಕ್ಲಿಷ್ಟವಾದ ಕೃತಿಯು. ಏಕೆಂದರೆ ಸಿದ್ಧವಾದ ಶಾಸ್ತ್ರೀಯ ಗ್ರಂಥದ ಅಭಾವದಿಂದ ಸಿದ್ಧ ಉತ್ತರ ಕೊಡಲಾಗುವದಿಲ್ಲ. ಅಂತೆಯೇ ಇದೊಂದು ವಿನೂತನ ಕೃತಿ ಎನ್ನುತ್ತೇನೆ. ಪರಂಪರಾನುಗತ ಶಾಸ್ತ್ರದಲ್ಲಿ ನಮಗೆ ದೊರೆಯದೇ ಇದ್ದ ಮೌಲ್ಯಮಾಪನಗಳನ್ನು ಸುದೀರ್ಘ ಅನುಭವದ ಫಲವಾಗಿ ಸಂಶೋಧಿಸಿ, ಆಧುನಿಕ ಕಾಲಮಾನಕ್ಕೆ ಅನುಗುಣವಾಗಿ ನಿರೂಪಿಸಿ, ಈ ಕೃತಿ ನಕ್ಷತ್ರವನ್ನು ಸಿದ್ಧಪಡಿಸಿದ್ದೇನೆ. ಯಾವುದೇ ಜಾತಕನ ಕುಂಡಲಿಯನ್ನು ಪರಿಶೀಲಿಸಬೇಕಾದರೆ, ಜ್ಯೋತಿಷಿಯು ಯಾವ ಮಾರ್ಗವನ್ನು ಅನುಸರಿಸಬೇಕು, ಯಾವ ಯಾವ ಅಂಶಗಳಿಗೆ ಎಷ್ಟೆಷ್ಟು ಗುಣಗಳನ್ನು ಹಾಕಬೇಕು (ನಿರ್ಧರಿಸಬೇಕು) ಎಂಬುದರ ಬಗೆಗೆ ರಚಿಸಿದ ಸಂಶೋಧನಾತ್ಮಕ ಕೃತಿ ಇದು. "**ಅಜ್ಞಾತ ಜಾತಕ ದರ್ಶನ**" ಈ ರೀತಿಯ ಮೊದಲನೆಯ ಕೃತಿಯಾದರೆ, "**ಕುಂಡಲಿ ಗುಣ ನಿರ್ಣಯ**" ಎರಡನೇಯ ಕೃತಿಯು. ಈ ಎರಡೂ ಕೃತಿಗಳು ಸಾಮಾನ್ಯ ಓದುಗರ ಕುತೂಹಲವನ್ನು ಕೆರಳಿಸಿ, ಜ್ಞಾನ ತೃಷೆಗೆ ಪೂರಕವಾಗುವ ಗ್ರಂಥಗಳಾದರೆ, ವೃತ್ತಿ ಜ್ಯೋತಿಷಿಗಳಿಗೆ ಮಾರ್ಗ ದರ್ಶನ ಕೃತಿಗಳಾಗಬಹುದೆಂದು ಹೇಳಬಹುದು. ಇನ್ನೊಂದು ವಿಶೇಷ

ಸಂಗತಿಯೆಂದರೆ ಸಾಮಾನ್ಯವಾಗಿ ನನಗೆ ಒಂದು ಪುಸ್ತಕ ಬರೆದು ಪ್ರಕಟಿಸಲು ಒಂದು ವರ್ಷ ಬೇಕಾಗುತ್ತದೆ. ಆದರೆ ಈ ಗ್ರಂಥವನ್ನು ಕೇವಲ ನಾಲ್ಕು ತಿಂಗಳಲ್ಲಿ ಬರೆದು ಪ್ರಕಟಿಸುತ್ತಿರುವೆ.

ನಾನು ಈ "**ಕುಂಡಲಿ ಗುಣ ನಿರ್ಣಯ**" ಬರೆಯಬೇಕೆಂದು ಉಪಕ್ರಮಿಸಿದಾಗ, ಅನೇಕರು ಅನೇಕ ರೀತಿಯಿಂದ ಸಹಾಯ ಮಾಡಿದ್ದಾರೆ. ಕರಡು ಪ್ರತಿಯನ್ನು ಈ ಮಹನೀಯರಿಗೆ ಓದಿ ತೋರಿಸಿದಾಗ, ಅನೇಕ ಉಪಯುಕ್ತ ಸಲಹೆ ಸೂಚನೆ ಕೊಟ್ಟು ಸಹಕರಿಸಿದ್ದಾರೆ. ಅವರೆಂದರೆ ನನ್ನ ಹಿರಿಯ ಮಿತ್ರರಾದ ಸರ್ವಶ್ರೀ ಮಾರ್ತಾಂಡರಾವ ವರಗಿರಿ, ಮಾರ್ತಾಂಡರಾವ ಐರಣಿ, ಪ್ರೊ. ಕೆ. ಎಸ್. ಶರ್ಮಾ, ಸಾಹಿತಿ ಎನ್. ಕೆ. ಕುಲಕರ್ಣಿ, ಬಿಷ್ಟೋ ವ್ಹಿ. ಪಾಟೀಲ, ಖ್ಯಾತ ನ್ಯಾಯವಾದಿ ಜಿ. ಎಮ್. ಪಾಟೀಲ, ಎಸ್. ವಿ. ಅಗ್ನಿಹೋತ್ರಿ, ಮತ್ತೀಹಳ್ಳಿ ನಾಗರಾಜರಾವ, ಎಸ್. ವಿ. ಪಾಟೀಲ, ಮದನಮೋಹನ ಜಿ. ಚಂದ್ರಶೇಖರ, ಮಹಾವೀರ ಪಾಂಡೆ, ಶ್ರೀ ಜಿ. ಆರ್. ಹುಯಿಲಗೋಳ ದಂಪತಿಗಳು, ಎಸ್.ಬಿ.ಗುತ್ತಲ ದಂಪತಿಗಳು, ತೇಜಸ್ವೀ ಸೊಸೈಟೀಯ ಚೇರಮನ್‌ರಾದ ಆರ್. ಬಿ. ಕುಲಕರ್ಣಿ, ಜಿ. ಬಿ. ಮುತ್ತೂರ, ವಿ. ಬಿ. ಕುಲಕರ್ಣಿ, ನರಸಿಂಹ ದಾಬಡೆ, ನರಸಿಂಹ ಜೋಶಿ, ಹೆಚ್. ಆರ್. ಕನವಳ್ಳಿ, ವಿ. ವಿ. ಕಡಕೋಳ, ಹೆಚ್. ಕೃಷ್ಣಮೂರ್ತಿ, ಪ್ರೊ. ಜಿ. ವಿ. ಕುಲಕರ್ಣಿ ಮುಂಬಯಿ, ಸಿ. ಜಿ. ಹೊನ್ನಾಪುರಮಠ ಇವರೆಲ್ಲರನ್ನು ನೆನೆಯುವೆ ಹಾಗೂ ಇವರ ಉಪಕಾರ ಸ್ಮರಿಸುವೆ. ಇನ್ನು ಹಸ್ತಪ್ರತಿಯನ್ನು ತಯಾರಿಸಲು ನೆರವಾದ ನನ್ನ ಕಿರಿಯ ಮಿತ್ರರಾದ ಕೆ. ಸಿ. ಪಾಟೀಲ, ಉಣಕಲ್ಲಿನ ಅಶೋಕ ಫೌಂಡ್ರಿಯ ಒಡೆಯರಾದ ಅಶೋಕ ದಾನಿ, ಶಹಾಜಿ ಶಿಂಧೆ, ಅವಿನಾಶ ಪಾಂಡೆ, ಡಾ. ಪಿ. ಪಿ. ಕಲ್ಲಾಪೂರ. ನಾಗರಾಜ ಸಿಂಗ ಠಾಕೂರ, ವಾಯ್. ಶಿವಯೋಗಿ, ಹನುಮಂತಪ್ಪಾ ಭೋಸಲೆ, ತೋಡಕರ ಬಂಧುಗಳು, ವಿ. ಪಿ. ಭುಜಂಗ, ನನ್ನ ಸಹೋದರರಾದ ಸದಾಶಿವ, ಶ್ರೀಪಾದ ಹಾಗೂ ಸಹೋದರಿ ಭೈಣಕ್ಕಾ ಇವರ ಸಹಾಯವನ್ನು ನೆನೆಯುವೆ,

ಈ ಪುಸ್ತಕವನ್ನು ಅಂದವಾಗಿಯೂ, ಸಕಾಲದಲ್ಲಿಯೂ ಮುದ್ರಿಸಿ ಕೊಟ್ಟ ಸರಸ ಮುದ್ರಣಾಲಯದ ಒಡೆಯರರಿಗೂ, ಅವರ ಸಿಬ್ಬಂದಿ ವರ್ಗದವರಿಗೂ ಚಿರಋಣಿ. ಅದರಲ್ಲಿಯೂ ಶ್ರೀ ವ್ಹಿ. ಕೆ. ಹೋಳೀಕಟ್ಟಿಯವರು ಕೇವಲ ಮುದ್ರಕರಾಗಿರದೆ, ಆತ್ಮೀಯ ಹಿರಿಯ ಮಿತ್ರರಾಗಿದ್ದು, ಕರಡು ಪ್ರತಿ ತಯಾರಿಸುವದರಲ್ಲಿ ಸಹಕರಿಸಿ ನೆರವಾಗಿದ್ದಾರೆ. ಅನೇಕ ಉಪಯುಕ್ತ ಸೂಚನೆಗಳನ್ನು ಕೊಟ್ಟಿದ್ದಾರೆ. ಕರಡು ಪ್ರತಿ ತಿದ್ದುವುದರಲ್ಲಿ ನೆರವಾಗಿದ್ದಾರೆ. ಅದಕ್ಕಾಗಿ ಅವರನ್ನು ಮತ್ತೊಮ್ಮೆ ಸ್ಮರಿಸುವೆ.

ಈ ಪುಸ್ತಕದ ಅಂದವಾದ ಮುಖ ಚಿತ್ರವನ್ನು ತಯಾರಿಸಿ ಕೊಟ್ಟ ದಿವಂಗತ ಜಿ. ಕೆ. ಮೂರ್ತಿ ಅವರಿಗೂ ಪಡಿಯಚ್ಚು ತಯಾರಿಸಿದ ಶಾರದಾ ಪ್ರೊಸೆಸ್ ಮಾಲಕರಾದ ಮಲಕಾಜಿ ಅವರನ್ನು ನೆನೆಸುವೆ.

ಈ ನನ್ನ ೧೫ ನೇ ಗ್ರಂಥವನ್ನು ಅರ್ಪಣೆ ಮಾಡಲು ಅನುಮತಿ ಕೊಟ್ಟ ನನ್ನ ಆತ್ಮೀಯ ಮಿತ್ರರಾದ ಬ್ರಾಹ್ಮಣ ಟೀ ಕ್ಲಬ್‌ದ ಒಡೆಯರೂ ಆದ ಶ್ರೀ ಕೆ. ಹರಿದಾಸ ಭಟ್ಟ ಇವರ ಅಭಿಮಾನ ಚಿರಸ್ಮರಣೀಯ.

ವಾಚಕರು ನನ್ನ ಉಳಿದ ಕೃತಿಗಳಂತೆ, ಈ ಹೊಸ ಹೊತ್ತಿಗೆಯನ್ನು ಎಂದಿನಂತೆ ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿರುವೆ.

೧೯೧೩, ಪ್ರಜಾಪತಿ ಸಂವತ್ಸರ
ಆಶ್ವೀನ ಶುದ್ಧ ಪೂರ್ಣಿಮಾ
(ಸೀಗೀ ಹುಣ್ಣಿವೆ) ಬುಧವಾರ
ತಾ. ೨೩-೧೦-೧೯೯೧

ಇಂತಿ ತಮ್ಮ ವಿಶ್ವಾಸಿ,

**ಎನ್. ಕೆ. ಜೋಗಳೇಕರ**
ತೇಜಸ್ವಿ ನಗರ, ಧಾರವಾಡ,

# ಪರಿವಿಡಿ

॥ ಶ್ರೀ ॥

# ಕುಂಡಲಿ ಗುಣ ನಿರ್ಣಯ
# (EVALUATION OF HOROSCOPE)



## ವಿಷಯ ಪ್ರವೇಶ

ಯಾವುದೇ ವಿಷಯದ ಅಧ್ಯಯನ ಸಮರ್ಪಕವೂ, ಸೂಕ್ತವೂ, ಯೋಗ್ಯವೂ ಆಗಬೇಕಾದರೆ ಅದಕ್ಕೆ ಒಂದಲ್ಲ ಒಂದು ರೀತಿಯ ಗುಣ ಮಾಪಕವು ಅತ್ಯವಶ್ಯವು. ವಿಷಯಗಳ ಅಭ್ಯಾಸ ಹೆಚ್ಚು ಹೆಚ್ಚು ವೈಜ್ಞಾನಿಕ ವಾಗಬೇಕಾದರೆ ಈ ಗುಣಮಾಪಕ ಅವಶ್ಯವಷ್ಟೇ ಅಲ್ಲ, ಅನಿವಾರ್ಯವು ಕೂಡ. ಆದುದರಿಂದ ಜ್ಯೋತಿಷ್ಯ ಶಾಸ್ತ್ರವು ಕೂಡ ಇದಕ್ಕೆ ಹೇಗೆ ಅಪವಾದವಾದೀತು ?

ಜ್ಯೋತಿಷ್ಯ ಶಾಸ್ತ್ರದಲ್ಲಿ ಕುಂಡಲಿಯ ಅಧ್ಯಯನ ಪದ್ಧತಿ ಆದಿ ಕಾಲದಿಂದಲೂ ಇರುವುದು ನಿಜ. ಆದರೆ ಈ ಬೆಳೆಯುತ್ತಿರುವ ಫಲ ಜ್ಯೋತಿಷ್ಯ ಶಾಸ್ತ್ರಕ್ಕೆ ವ್ಯಕ್ತಿ ಜೀವನ, ಸಮಾಜ ಜೀವನ ಹಾಗೂ ಪರಿಸರದ ಪರಿಣಾಮಗಳ ತುಲನಾತ್ಮಕ ಹಾಗೂ ಪರಸ್ಪರ ಪ್ರಭಾವಗಳ ಅಧ್ಯಯನ ಮಾಡುವಾಗ ಹೊಸ ಹೊಸ ಗುಣ ಮಾಪನಗಳ ಅನ್ವೇಷಣೆ ಹಾಗೂ ಸಂಶೋಧನೆ ಬಹಳ ಅವಶ್ಯವು.

ಜಾತಕನ ಜಾತಕವನ್ನು (ಕುಂಡಲಿಯನ್ನು) ಕೇವಲ ಪರಂಪರಾನುಗತ ಅಧ್ಯಯನ ಪದ್ಧತಿಯಲ್ಲಿ ಮಾಡಿದಾಗ ಆ ಅಧ್ಯಯನದ ಫಲಿತಾಂಶ ಈ ವೈಜ್ಞಾನಿಕ ಯುಗದ ಕ್ಲಿಷ್ಟತೆ ಹಾಗೂ ಸಂಕೀರ್ಣತೆಗಳನ್ನು ಪರಿಪೂರ್ಣ ವಾಗಿ ಪ್ರತಿಬಿಂಬಿಸಲಾರದೆಂಬ ವಿವೇಚನೆ ಮಾಡಿದಾಗ **ಕುಂಡಲಿಯ ಗುಣ ನಿರ್ಣಯಕ್ಕೆ** ಹೊಸ ಹೊಸ ವಿಧಾನ ನವ ನವ ಉಪಕರಣಗಳ ಶೋಧ ಮಾಡುವುದು ಅನಿವಾರ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಫಲ ಜ್ಯೋತಿಷ್ಯ ಶಾಸ್ತ್ರದ ವೈಜ್ಞಾನಿಕ ಅಧ್ಯಯನಕ್ಕೆ ಪೂರಕವಾಗುವಂತೆ ಗುಣ ಮಾಪನಗಳ ಸಂಶೋಧನೆ ಮಾಡುವುದು ಒಂದು ಅನಿವಾರ್ಯವು.

ಜ್ಯೋತಿಷ್ಯ ಶಾಸ್ತ್ರದ ಪುರಾತನ ಕೃತಿಗಳಲ್ಲಿ ಇಂದಿನ ಸವಾಲುಗಳಿಗೆ ಉತ್ತರಗಳಿಲ್ಲದಾಗ, ವಿಸ್ತಾರಗೊಳ್ಳುತ್ತಿರುವ ಈ ಶಾಸ್ತ್ರವನ್ನು ಬೆಳೆಸಲು ಹೊಸ ಗುಣಮಾಪನಗಳ ಸಂಶೋಧನೆ, ಗುಣಮಾಪನಗಳ ಬಳಕೆಯ ವಿಧಾನ ಗಳ ಪ್ರಯೋಗದ ಪದ್ಧತಿಗಳ ಅನ್ವೇಷಣೆ ಅವಶ್ಯವೆಂಬ ಅರಿವಿನಿಂದ ಈ ಸಾಹಸಕ್ಕೆ ಕೈಹಾಕಿದ್ದೇನೆ. ಈ ಕಾರ್ಯ ಅತ್ಯಂತ ಕ್ಲಿಷ್ಟವಿದ್ದಂತೆ. ವಿನೂತನವೂ ಇರುವುದರಿಂದ ಸುಲಭ ಸಾಧ್ಯವಲ್ಲ ಎಂಬುದನ್ನು ನಾನು ಬಲ್ಲೆ. ಎಲ್ಲ ಸಂಶೋಧನೆಯ ಕಾರ್ಯವು ಹೀಗೆಯೇ ಇರುತ್ತದೆ. ನಾನು ನನ್ನ ಫಲ ಜ್ಯೋತಿಷ್ಯ, ಜ್ಯೋತಿರ್ ಮಾಲೆಯ ನಕ್ಷತ್ರಗಳಾದ– ವಧೂ-ವರರ ಜ್ಯೋತಿಷ್ಯ, ಸ್ತ್ರೀ ಜ್ಯೋತಿಷ್ಯ, ಸಾಡೇಸಾತಿ, ಆಕಸ್ಮಿಕ ಧನ ಯೋಗ, ಪಂಚಾಂಗ ಪ್ರದೀಪ, ಉದ್ಯೋಗ ಜ್ಯೋತಿಷ್ಯ ಭಾಗ–೧, (ನೌಕರೀಯ ಮಾರ್ಗದರ್ಶನ,) ಉದ್ಯೋಗ ಜ್ಯೋತಿಷ್ಯ ಭಾಗ–೨, (ವೃತ್ತಿ ಮಾರ್ಗದರ್ಶಿ,) ಅಜ್ಞಾತ ಜಾತಕ ದರ್ಶನ, ಅಧಿಕಾರಿ ಜ್ಯೋತಿಷಿ, ಶಿಕ್ಷಣ ಜ್ಯೋತಿಷ್ಯ, ಶಕುನ ಜ್ಯೋತಿಷ್ಯ, ಗ್ರಹಗತಿ, ಆರೋಗ್ಯ ಜ್ಯೋತಿಷ್ಯ, ಚುನಾ ವಣೆಯ ಜ್ಯೋತಿಷ್ಯ ಈ ಗ್ರಂಥಗಳ ಮೂಲಕ ನನ್ನ ಅನುಭವದ ಅಧ್ಯಯನದ ಪರಿಪಾಕವನ್ನು ಫಲ ಜ್ಯೋತಿಷ್ಯ ಶಾಸ್ತ್ರದ ಭಂಡಾರಕ್ಕೆ ಅರ್ಪಿಸಿದ್ದೇನೆ. ಈ ಗ್ರಂಥಗಳ ಮೂಲಕ ಸಾಮಾನ್ಯ ಓದುಗರು ಕೂಡ ಜ್ಯೋತಿಷ್ಯ ಶಾಸ್ತ್ರದ ತಿರು ಳನ್ನು ಅರ್ಥಮಾಡಿಕೊಳ್ಳುವ ಅವಕಾಶ ಕಲ್ಪಿಸಿದ್ದೇನೆ. ಈ ಮೇಲಿನ ಕೃತಿ ಗಳಲ್ಲಿ ಕೆಲವನ್ನು ವೃತ್ತಿ ಜ್ಯೋತಿಷಿಗಳ ಮಾರ್ಗದರ್ಶನಕ್ಕಾಗಿ ಬರೆದಿದ್ದೇನೆ.

ಮತ್ತೆ ಕೆಲವನ್ನು ಸಾಮಾನ್ಯ ಓದುಗರು ಓದಿ, ಶಾಸ್ತ್ರದ ಸವಿಯನ್ನು ಅನು ಭವಿಸಲು ಸಾಧ್ಯವಾಗುವಂತೆ ಬರೆದಿದ್ದೇನೆ. ಆದರೆ ಈಗ ಬರೆಯಲು ಕೈಕೊಂಡ ಕೃತಿ ಒಂದು ವಿನೂತನ ಸಂಶೋಧನಾ ಕೃತಿಯಾಗಿದ್ದು, ಇದು ವೃತ್ತಿ ಜ್ಯೋತಿಷಿಗಳಿಗೆ ಮಾತ್ರ ಮಾರ್ಗದರ್ಶನ ಕೃತಿಯಾಗಬಹುದೆಂದು ಹೇಳಬಲ್ಲೆ. ಈ ದೃಷ್ಟಿಯಿಂದ **ಕುಂಡಲಿ ಗುಣ ನಿರ್ಣಯ** ಒಂದು ವಿಶೇಷ ಕೃತಿ; ವಿಶಿಷ್ಟ ಕೃತಿ. ಫಲ ಜ್ಯೋತಿಷ್ಯ ಶಾಸ್ತ್ರಕ್ಕೆ ಒಂದು ಹೊಸ ಕೊಡುಗೆ ಯಾಗಬಹುದಾಗಿದೆ.

ಕುಂಡಲಿ ಗುಣ ನಿರ್ಣಯವನ್ನು ಕೈಕೊಳ್ಳುವ ಮುನ್ನ ಜಾತಕನ ಜಾತಕ ಅರ್ಥಾತ್ ಕುಂಡಲಿ ಸರಿಯಾಗಿದೆಯೋ ಇಲ್ಲವೋ ನಿರ್ಣಯ ಮಾಡುವುದು ಅತ್ಯವಶ್ಯವು. ಕುಂಡಲಿ ಸರಿಯಾಗಿಲ್ಲದಿದ್ದರೆ, ಜಾತಕನ ಜಾತಕದ (ಭವಿತವ್ಯದ) ಮೌಲ್ಯಮಾಪನ ಹೇಗೆ ಸರಿಯಾದೀತು ? ಕುಂಡಲಿ (ಜಾತಕ) ತಪ್ಪಾಗಿರಲು ಅನೇಕ ಕಾರಣಗಳಿವೆ. ಕೆಲ ಪ್ರಮುಖ ಕಾರಣ ಗಳನ್ನು ಈ ಕೆಳಗಿನಂತೆ ಬರೆಯಲಾಗಿದೆ.

೧) ಎರಡನೇ ಮಹಾ ಯುದ್ಧದ ಕಾಲದಲ್ಲಿ ಬ್ರಿಟನ್ನಿನ ಮಾಜಿ ಪ್ರಧಾನಿ ದಿ ಚರ್ಚಿಲ್ಲರು ತಮ್ಮ ಯುದ್ಧ ತಂತ್ರದ ಅನುಕೂಲತೆಗಾಗಿ ೧-೯-೧೯೪೨ ರಿಂದ ೧೫-೧೦-೧೯೪೫ ರ ವರೆಗಿನ ಪರಿಸ್ಥಿತಿಯ ಮಹತ್ವದ ಆಲೋಚನೆಗಾಗಿ ಈಗಿನ ಸ್ಟ್ಯಾಂಡರ್ಡ ಟಾಯಿಮನ್ನು ಒಂದು ಗಂಟೆ ಮುಂದಿಟ್ಟು, ಅದನ್ನು ಕಾನೂನಿನಲ್ಲಿ ತಂದು, ಮೂರು ವರ್ಷಗಳ ನಂತರ ರದ್ದು ಮಾಡಿದರು. ಈ ವೇಳಾಂತರವು ಜ್ಯೋತಿಷಿಗಳಿಗೆ ಸಮಸ್ಯೆಯನ್ನು ತಂದೊಡ್ಡಿದೆ. ಈ ಅವಧಿಯಲ್ಲಿ ಜನಿಸಿದ ಕೆಲವರು ತಿದ್ದಿದ (ಹೊಸ ವೇಳೆ) ವೇಳೆಯನ್ನೇ ಗುರ್ತು ಹಾಕಿಕೊಂಡರೆ, ಕೆಲವರು ಅದೇ ವೇಳೆ ಯನ್ನು (ಹಳೇವೇಳೆ) ಗುರ್ತು ಹಾಕಿಕೊಂಡಿರುತ್ತಾರೆ. ಇದರಿಂದಾಗಿ ಜಾತಕಗಳಲ್ಲಿ ವ್ಯತ್ಯಾಸವಾಗುವ ಸಂಭವವಿದೆ.

೨) ಎರಡನೆಯದಾಗಿ ಕೆಲವು ಸಲ ವಧೂ-ವರರ ಜಾತಕಗಳ ಸಾಮ್ಯತ್ವ ಸಾಧಿಸಲು (ಜಾತಕಗಳ ಮೇಳಾಮೇಳ ಸಾಲಾವಳಿ) ನಿರ್ಮಾಣ

ವಾಗುವ ಬೊಟ್ಟಿ ಜಾತಕಗಳ ಹಾವಳಿ, ಅಲ್ಲದೇ ಶಾಲಾ ಪ್ರವೇಶಕ್ಕಾಗಿ ಮತ್ತು ನೌಕರಿಯ ಭರ್ತಿಗಾಗಿ ರಚಿಸಲ್ಪಡುವ ಕೃತ್ರಿಮ ಜಾತಕದ ಹಾವಳಿ ಇನ್ನೊಂದೆಡೆಗೆ ಬೇರೆ ಬೇರೆ ಪಂಚಾಂಗಗಳಲ್ಲಿಯ ಒಂದೇ ದಿನದಲ್ಲಿಯ ನಕ್ಷತ್ರ, ಚರಣ, ರಾಶಿ ಗ್ರಹಗಳ ರಾಶ್ಯಾಂತರಗಳಲ್ಲಿಯೂ ವಿಭಿನ್ನತೆ ಉಂಟಾಗಿ ವಿಭಿನ್ನ ಜಾತಕಗಳು ಉಂಟಾಗುತ್ತವೆ.

೩) ವೈದ್ಯಕೀಯ ಚಿಕಿತ್ಸಾ ವಿಧಾನಗಳಲ್ಲಿ ಬಹಳಷ್ಟು ಆಧುನೀಕರಣ ವಾಗಿದೆ. ನಿಧಾನ ವಿಧಾನವಲ್ಲಿಯೂ ಆಧುನೀಕರಣವಾಗಿದೆ, ಬಾಡೀ ಸ್ಕೀನ ಸಹ ಬಂದಿವೆ. ಒಂದು ಕಾಲದಲ್ಲಿ ಶಿಶುವಿನ ಜನನ ತಾಯಿಗೆ ಪುನರ್ ಜನನವೇನೋ ಎಂಬಂತಿತ್ತು. ಆದರೆ ವೈದ್ಯಕೀಯ ಆಧುನೀಕರಣ ದಿಂದಾಗಿ (ಫೋರೇಸೆಪ್ಸ ವಿಧಾನ) ಅಲ್ಲದೇ ಶಸ್ತ್ರಕ್ರಿಯೆಯಿಂದಾಗಿ ಜನಿಸಿದ ಶಿಶುಗಳು. ಇದು ಅಲ್ಲದೇ ಪ್ರಯೋಗಾಲಯದ ಲಳಿಕೆಯ ಶಿಶುಗಳು (ಟೆಸ್ಟ ಟ್ಯೂಬಬಾರ್ನ) ಜನನ. ಅಷ್ಟೇ ಏಕೆ ಜನನ ಸಮಯದಲ್ಲಿಯ ೫-೧೦ ನಿಮಿಷ ಗಳ ಅಂತರದಲ್ಲಿಯೂ ಜಾತಕ ಕುಂಡಲಿಯಲ್ಲಿಯ ವ್ಯತ್ಯಾಸ ಉಂಟಾಗಬಹು ದಾಗಿದೆ. ಆದುದರಿಂದ ಕುಂಡಲಿ ನಿರ್ಣಯಕ್ಕಿಂತ ಪೂರ್ವದಲ್ಲಿ ಕುಂಡಲಿ ಸರಿ ಯಾಗಿದೆಯೋ ಹೇಗೆ ಎಂಬುದನ್ನು ಮೊದಲು ಖಚಿತಪಡಿಸಿಕೊಳ್ಳಬೇಕು, ಒಂದು ವೇಳೆ ಜಾತಕ ಸರಿ ಇಲ್ಲದಿದ್ದರೆ, ಸರಿಯಾದ ಜಾತಕವನ್ನು ನಿರ್ಧರಿಸಬೇಕು, ನಿರ್ಣಯಿಸಬೇಕು. ಸಂದಿಗ್ಧ ಜಾತಕವನ್ನು, ಸರಿಯಾದ ಜಾತಕವನ್ನು ಹೇಗೆ ನಿರ್ಧರಿಸಬೇಕು, ಹೇಗೆ ಖಚಿತಪಡಿಸಬೇಕು ಎಂಬು ದರ ಬಗೆಗೆ ನಾವು ಬರೆದು ಪ್ರಕಟಿಸಿದ **ಅಜ್ಞಾತ ಜಾತಕ ದರ್ಶನ** ಎಂಬ ನಮ್ಮ ಗ್ರಂಥದಲ್ಲಿ ವಿವರವಿವರವಾಗಿ ವಿಶ್ಲೇಷಿಸಲಾಗಿದೆ. ಆ ಕೃತಿಯನ್ನು ಅಧ್ಯಯನ ಮಾಡಿ, ಕುಂಡಲಿ ಸರಿಯಾಗಿದೆ ಎಂಬುದನ್ನು ಖಚಿತ ಪಡಿಸಿಕೊಂಡು, ಕುಂಡಲಿ ಗುಣ ನಿರ್ಣಯಕ್ಕೆ ಕೈಹಾಕಬೇಕೆಂದು ನಮ್ಮ ವೃತ್ತಿ ಬಾಂಧವರಿಗೆ ಒತ್ತಿ ಹೇಳಿ, ಆ ಬಳಿಕ ಮುಂದಿನ ವಿಶ್ಲೇಷಣಕ್ಕೆ ಕೈ ಹಾಕುತ್ತೇನೆ.

ಕುಂಡಲಿ ಗುಣ ನಿರ್ಣಯವನ್ನು ದಶಮ ದೃಷ್ಟಿಕೋನ ಗುಣ ಮಾಪನದ ವಿಧಾನದಲ್ಲಿ ಮಾಡಬೇಕು. ಕುಂಡಲಿ ಗುಣ ನಿರ್ಣಯಕ್ಕೆ ಬಳಸಲಾಗುವ ಈ ಹತ್ತು ಗುಣ ಮಾಪನಗಳು ಈ ರೀತಿಯಾಗಿವೆ,

೧) ಆರೋಗ್ಯ ಹಾಗೂ ಆಯುರ್ಮಾನ, ೨) ಮಾತೃ ಸೌಖ್ಯ, ೩) ಪತಿ ಸೌಖ್ಯ ಹಾಗೂ ಪತ್ನೀ ಸೌಖ್ಯ, ೪) ಆರ್ಥಿಕ ಸ್ಥಿತಿ, ೫) ಶಿಕ್ಷಣ, ೬) ಉದ್ಯೋಗ ಹಾಗೂ ಸೌಕರಿ, ೭) ಸಂತಾನ ಸೌಖ್ಯ, ೮) ಶತ್ರು–ಮಿತ್ರ ಸಹೋದರ–ಸಹೋದರಿಯರ ಸೌಖ್ಯ, ೯) ಭಾಗ್ಯ, ೧೦) ಶುಭ-ಅಶುಭ ಯೋಗಗಳ ವಿಚಾರ. ಈ ಹತ್ತು ದೃಷ್ಟಿಕೋನಗಳಿಂದ ಮೌಲ್ಯಮಾಪನ ಮಾಡಬೇಕು. ಅವುಗಳ ವಿವರ ಹೀಗಿದೆ :

| | | |
|---|---|---|
| ೧) ಆರೋಗ್ಯ ಹಾಗೂ ಆಯುರ್ಮಾನ | ಗುಣಗಳು | ೧೦ |
| ೨) ಮಾತೃಸೌಖ್ಯ | ಗುಣಗಳು | ೧೫ |
| ೩) ಪತಿ ಹಾಗೂ ಪತ್ನೀ ಸೌಖ್ಯ | ಗುಣಗಳು | ೧೫ |
| ೪) ಆರ್ಥಿಕ ಸ್ಥಿತಿ | ಗುಣಗಳು | ೧೦ |
| ೫) ಶಿಕ್ಷಣ | ಗುಣಗಳು | ೮ |
| ೬) ಉದ್ಯೋಗ | ಗುಣಗಳು | ೮ |
| ೭) ಸಂತಾನ | ಗುಣಗಳು | ೮ |
| ೮) ಭಾಗ್ಯ | ಗುಣಗಳು | ೮ |
| ೯) ಶತ್ರು–ಮಿತ್ರ, ಸಹೋದರ-ಸಹೋದರಿಯರ ಸೌಖ್ಯ | ಗುಣಗಳು | ೮ |
| ೧೦) ಶುಭ ಅಶುಭ ಯೋಗಗಳ | ಗುಣಗಳು | ೧೦ |
| | ಒಟ್ಟು ಗುಣಗಳು | ೧೦೦ |

ಹೀಗೆ ೧೦ ಅಧ್ಯಾಯಗಳಲ್ಲಿ ೧೮೦ ಗುಣಗಳ ಮಾಪನ ಮಾಡಿದ ನಂತರ ೧೧ ನೇ ಅಧ್ಯಾಯದಲ್ಲಿ ಕುಂಡಲಿ ವರ್ಗೀಕರಣವನ್ನು ಹೇಗೆ ಮಾಡಬೇಕು, ಇದಲ್ಲದೇ ೧೨ ನೇ ಅಧ್ಯಾಯದಲ್ಲಿ ಮಾದರೀ ಕುಂಡಲಿಗಳ ವಿಶ್ಲೇಷಣೆಯನ್ನು ೧೩ ನೇ ಅಧ್ಯಾಯದಲ್ಲಿ ಸುದೈವೀ ವ್ಯಕ್ತಿ ಯಾರು, ಸುದೈವಿ ಜಾತಕ ಹೇಗಿರುತ್ತದೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಹಾಗೂ ೧೪ ನೇ ಅಧ್ಯಾಯದಲ್ಲಿ ನನ್ನ ಸುದೀರ್ಘ ವೃತ್ತಿ ಜೀವನದಲ್ಲಿ ಪಡೆದ ಅನುಭವಗಳನ್ನು ನಿಯಮಗಳ ರೂಪದಲ್ಲಿ ಚಿತ್ರಿಸಿದ್ದೇನೆ.

ಈ ರೀತಿಯಾಗಿ ಹದಿನಾಲ್ಕು ಅಧ್ಯಾಯಗಳ **ಕುಂಡಲಿ ಗುಣ ನಿರ್ಣಯ** ನನ್ನ ೧೫ ನೇ ಕೃತಿಯು. ಇದನ್ನು ವೃತ್ತಿ ಜ್ಯೋತಿಷಿಗಳ ಮಾರ್ಗದರ್ಶನ ಕೃತಿಯಾಗಿ ಸಮರ್ಪಿಸುತ್ತಿದ್ದೇನೆ.



# ೧

# ಆರೋಗ್ಯ ಹಾಗೂ ಆಯುರ್ವಾನ

## ಗುಣಗಳು ೧೦

ಕುಂಡಲಿ ಗುಣ ನಿರ್ಣಯದ ಮೊದಲನೇ ಅಧ್ಯಾಯದಲ್ಲಿ ಆರೋಗ್ಯ ಹಾಗೂ ಆಯುರ್ವಾನದ ಬಗೆಗೆ ಮೊದಲು ಪ್ರಸ್ತಾಪಿಸುತ್ತೇನೆ. ಇದಕ್ಕೇಕೆ ಪ್ರಥಮ ಪ್ರಾಶಸ್ತ್ಯವೆಂದರೆ, ಜಾತಕನಿಗೆ (ಮಾನವನಿಗೆ) ಆರೋಗ್ಯ ಭಾಗ್ಯ ಒಂದು ಲೋಪವಾದರೆ, ಇನ್ನೆಲ್ಲ ಭಾಗ್ಯ ಇದ್ದೂ ವ್ಯರ್ಥ. ಇದನ್ನೇ ವಚನಕಾರರ ಮಾತಿನಲ್ಲಿ ಹೇಳಬೇಕೆಂದರೆ – 'ಅರ್ಥರೇಖೆ ಇದ್ದಲ್ಲಿ ಫಲ ವೇನು। ಆಯುಷ್ಯರೇಖೆ ಇಲ್ಲದನ ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು ? । ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದು ಫಲವೇನು ? ।' ಅಂದರೆ ಕೈಯಲ್ಲಿ ಅರ್ಥರೇಖೆ ಇದ್ದವನು ಅರ್ಥಾತ್ ಹಣದ ಅದೃಷ್ಟ ವಿದ್ದವನು ಅದನ್ನು ಪಡೆಯಲು, ಸುಖ ಭೋಗಿಸಲು ಆಯುಷ್ಯವಂತ ನಾಗಿರಬೇಕು ಆಯುಷ್ಯವೇ ಕ್ಷೀಣವಾಗಿದ್ದಾಗ, ಅರ್ಥವಿದ್ದು ಉಪಯೋಗ ವೇನು ? ಇನ್ನು ಆಯುಷ್ಯವಿದ್ದು, ಆರೋಗ್ಯ ಸರಿ ಇಲ್ಲದಿದ್ದರೆ. ಸದಾ ರೋಗ ಪೀಡಿತನಾಗಿದ್ದರೆ, ಇತರ ಭಾಗ್ಯಗಳ ಸವಿಯನ್ನು ಉಣ್ಣಲಾರ. ಆದುದರಿಂದ ಯಾವುದೇ ಕುಂಡಲಿಯ ಗುಣ ನಿರ್ಣಯ ಮಾಡಬೇಕಾದರೆ ಒಂದೆಡೆ ದೀರ್ಘಾಯುಷ್ಯ ಹಾಗೂ ಇನ್ನೊಂದೆಡೆ ಉತ್ತಮ ಆರೋಗ್ಯ ವಿರುವುದು ಅತ್ಯಾವಶ್ಯವು. ಆದುದರಿಂದ ಈ ಅಧ್ಯಾಯದಲ್ಲಿ ಆರೋಗ್ಯ ಹಾಗೂ ಆಯುರ್ವಾನದ ಬಗೆಗೆ ವಿಶ್ಲೇಷಿಸಲಾಗಿದೆ.

ಯಾರೊಬ್ಬ ಜಾತಕನ ಆರೋಗ್ಯ ಹಾಗೂ ಆಯುರ್ವಾನದ ವಿಷಯವಾಗಿ ಅವರಲ್ಲಿಯೂ ಆರೋಗ್ಯದ ವಿಷಯವಾಗಿ ವಿಚಾರಿಸುವಾಗ

ನಾವು ಐದು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕಾಗುತ್ತದೆ. ೧) ಲಗ್ನ (ತನುಸ್ಥಾನ) ಹಾಗೂ ಲಗ್ನೇಶ. ೨) ಷಷ್ಠಸ್ಥಾನ ಹಾಗೂ ಷಷ್ಠೇಶ. ೩) ಅಷ್ಟಮಸ್ಥಾನ ಹಾಗೂ ಅಷ್ಟಮೇಶ. ೪) ಸೂರ್ಯ (ರವಿ). ೫) ಚಂದ್ರ. ಈ ಐದು ಸಂಗತಿಗಳು ಪೂರಕವಿದ್ದರೆ, ಹತ್ತು ಗುಣಗಳಿಗೆ ಹತ್ತು ಗುಣಗಳು ಬರುತ್ತವೆ. ಈ ಐದು ಸಂಗತಿಗಳು ಪ್ರತಿಕೂಲವಿದ್ದರೆ ಶೂನ್ಯ ಗುಣ ಬೀಳುತ್ತವೆ ಇವರಲ್ಲಿ ೧–೨ ಸಂಗತಿಗಳು ಪೂರಕವಿದ್ದರೆ ಕಡಿಮೆ ಗುಣಗಳು ಬೀಳುತ್ತವೆ. ಅವುಗಳ ವಿವರಣೆ ಹೀಗಿದೆ ;

## ೧) ತನುಸ್ಥಾನದ ಮೇಲಿಂದ :

ಜಾತಕನ ಜಾತಕದ (ತನುಸ್ಥಾನದಲ್ಲಿ) ಲಗ್ನದಲ್ಲಿ ಬಲಾಢ್ಯ ಗ್ರಹ ವಿದ್ದು, ಲಗ್ನೇಶನು ಬಲಾಢ್ಯನಿದ್ದರೆ ಇಂಥ ವ್ಯಕ್ತಿಗಳು ಸದೃಢ ಪ್ರಕೃತಿ ಯುಳ್ಳವರಿದ್ದು, (General health condition is good) ಅವರ ನೈಸರ್ಗಿಕ ಜೀವನ ಶಕ್ತಿ (vital power) ಉತ್ತಮವಿರುತ್ತದೆ. ಲಗ್ನ ಹಾಗೂ ಲಗ್ನೇಶರು ಪೋಷಕರಿದ್ದರೆ ೨ ಗುಣಗಳು ಬರುತ್ತವೆ. ಇವರಲ್ಲಿ ಲಗ್ನೇಶನು ಬಲಾಢ್ಯನಿದ್ದು, ಲಗ್ನದಲ್ಲಿ ದುರ್ಬಲ ಗ್ರಹವಿದ್ದರೆ ೧ ಗುಣ ಬೀಳುತ್ತದೆ. ಇದರಂತೆ ಲಗ್ನದಲ್ಲಿ ಬಲಾಢ್ಯ ಗ್ರಹವಿದ್ದು, ಲಗ್ನೇಶನು ನಿರ್ಬಲನಿದ್ದರೂ ೧ ಗುಣ ಬರುತ್ತದೆ. ಲಗ್ನದಲ್ಲಿ ಯಾವುದೇ ಗ್ರಹವಿಲ್ಲದಿದ್ದರೆ ಲಗ್ನೇಶನ ಬಲಾಬಲದ ಮೇಲೆ ಗುಣಗಳನ್ನು ನಿರ್ಧರಿಸಬೇಕು.

## ೨) ಷಷ್ಠಸ್ಥಾನದ ಮೇಲಿಂದ :

ಷಷ್ಠಸ್ಥಾನವಿದು ರೋಗಸ್ಥಾನವು. ಅವರಲ್ಲಿಯೂ ತೀವ್ರಬಾಧೆಯ (Acute diseases) ಎಲ್ಲ ರೋಗಗಳಿಗೂ ಈ ಸ್ಥಾನವು ಕಾರಕವು. ಷಷ್ಠಸ್ಥಾನ ಹಾಗೂ ಷಷ್ಠೇಶರು ಬಲಾಢ್ಯರಿದ್ದ ಜಾತಕನು ನಿರೋಗಿಯಿರುತ್ತಾನೆ. ಆದ್ದರಿಂದ ಇಲ್ಲಿ ೨ ಗುಣಗಳಿಗೆ ೨ ಗುಣಗಳು ಬರುತ್ತವೆ. ಆದರೆ ಷಷ್ಠಸ್ಥಾನ ಹಾಗೂ ಷಷ್ಠೇಶರು ನಿರ್ಬಲ ದುರ್ಬಲರಿದ್ದರೆ ಶೂನ್ಯ ಗುಣ ಬರುತ್ತದೆ. ಆದರೆ ಷಷ್ಠೇಶ ಬಲಾಢ್ಯನಿದ್ದು, ಷಷ್ಠಸ್ಥಾನದಲ್ಲಿ ದುರ್ಬಲ ಗ್ರಹವಿದ್ದರೆ ೧ ಗುಣ ಬರುತ್ತದೆ. ಇದರಂತೆ ಷಷ್ಠಸ್ಥಾನದಲ್ಲಿ

ಬಲಾಢ್ಯ ಗ್ರಹವಿದ್ದು ಷಷ್ಠೇಶ ದುರ್ಬಲನಿದ್ದರೂ ಕೂಡ ಒಂದು ಗುಣ ಬರುತ್ತದೆ. ಷಷ್ಠದಲ್ಲಿ ಯಾವುದೊಂದು ಗ್ರಹವಿರದಿದ್ದರೆ ಷಷ್ಠೇಶನ ಬಲಾಬಲದ ಮೇಲೆ ಗುಣಗಳನ್ನು ನಿರ್ಧರಿಸಬೇಕು.

### ೩) ಅಷ್ಟಮಸ್ಥಾನದ ಮೇಲಿಂದ :

ಅಷ್ಟಮಸ್ಥಾನವಿದು ಮೃತ್ಯುಸ್ಥಾನವಿದ್ದು, ಎಲ್ಲ ಪ್ರಕಾರದ ದುರ್ಮರಣಕಾರಕ (Accidental deaths) ಸ್ಥಾನವು. ಅಷ್ಟೇ ಏಕೆ ಆಯುವರ್ಧನ ಸ್ಥಾನವೂ ಹೌದು. ಆದುದರಿಂದ ಅಷ್ಟಮಸ್ಥಾನ ಹಾಗೂ ಅಷ್ಟಮೇಶರು ಬಲಾಢ್ಯರಿದ್ದರೆ ೨ ಗುಣಗಳು. ಅಷ್ಟಮಸ್ಥಾನ ಹಾಗೂ ಅಷ್ಟಮೇಶರು ದುರ್ಬಲರಿದ್ದರೆ ಶೂನ್ಯಗುಣ. ಆದರೆ ಅಷ್ಟಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದು, ಅಷ್ಟಮೇಶನು ದುರ್ಬಲನಿದ್ದರೂ ಕೂಡ ೧ ಗುಣ. ಇದರಂತೆ ಅಷ್ಟಮೇಶನು ಬಲಾಢ್ಯನಿದ್ದು, ಅಷ್ಟಮದಲ್ಲಿ ದುರ್ಬಲ ಗ್ರಹವಿದ್ದರೂ ಕೂಡ ೧ ಗುಣ. ಅಷ್ಟಮದಲ್ಲಿ ಯಾವುದೊಂದು ಗ್ರಹವಿರದಿದ್ದರೆ ಅಷ್ಟಮೇಶನ ಬಲಾಬಲದ ಮೇಲೆ ಗುಣಗಳನ್ನು ನಿರ್ಧರಿಸಬೇಕು.

### ೪) ಸೂರ್ಯನ ಮೇಲಿಂದ

ಯಾರೊಬ್ಬರ ಆರೋಗ್ಯ ಹಾಗೂ ಆಯುವರ್ಧನ ಬಗೆಗೆ ವಿಚಾರಿಸುವಾಗ ಅದರಲ್ಲಿಯೂ ಆರೋಗ್ಯದ ಬಗೆಗೆ ವಿಚಾರಿಸುವಾಗ ಸೂರ್ಯನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಮಾನವ ಸಮುದಾಯಕ್ಕೆ ಸೂರ್ಯನು ಆತ್ಮಸ್ವರೂಪನು. ಅಷ್ಟೇ ಅಲ್ಲ, ಇಡೀ ಪ್ರಪಂಚಕ್ಕೆ ಅವನು ಆತ್ಮಸ್ವರೂಪನಾಗಿರುವನು. ಸೂರ್ಯನಿಂದಲೇ ಸಕಲ ಜೀವರಾಶಿಗಳು ಬದುಕುತ್ತವೆ. ಆದುದರಿಂದ ಫಲ ಜ್ಯೋತಿಷ್ಯದಲ್ಲಿ ಆತ್ಮಕಾರಕನಾದ ರವಿಗೆ ಪ್ರಾಧಾನ್ಯವಿದೆ. ರವಿಯಿಂದಲೇ ಹಗಲು ರಾತ್ರಿಗಳು ಋತುಮಾನಗಳ ಬೆಳವಣಿಗೆಗಳು. ಜಾತಕದಲ್ಲಿಯ ಲಗ್ನಾದಿಗಳಿಗೂ ರವಿಯೇ ಕಾರಣನಿರುತ್ತಾನೆ. ಇದಲ್ಲದೇ ಶರೀರದಲ್ಲಿಯ ರುಧಿರಾಭಿಸರಣ, ಹೃದಯ, ಶಿರಸ್ಸು, ಮಸ್ತಿಷ್ಕ, ಕಣ್ಣು, ಬೆನ್ನು, ಬೆನ್ನೆಲುಬು, ಸಣ್ಣಕರುಳು, ಎಲಬು (ಅಸ್ಥಿ), ರಕ್ತ. ರಕ್ತದಲ್ಲಿಯ ಕೆಂಪು ಗೋಲಕ ಈ ಎಲ್ಲ ಅವಯವಗಳ ಮೇಲೆ ಅವನದೇ ಆಧಿಪತ್ಯವಿರುವುದರಿಂದ, ಈ ಅವಯವಗಳಿಗೆ ಸಂಬಂಧಿಸಿದ

ವಿಕಾರಗಳಿಗೆ, ರೋಗಗಳಿಗೆ ರವಿಯೇ ಕಾರಕನಿರುವುದು ಕೂಡ ಸಹಜವೆ. ಅಷ್ಟೇ ಏಕೆ ಪ್ರಾಣ ವಾಯುವಿನ ಮೇಲೆಯೂ ಸೂರ್ಯನದೆ ಆಧಿಪತ್ಯವಿದೆ. **ಅಂತೆಯೇ ಫಲಜ್ಯೋತಿಷ್ಯದಲ್ಲಿ ಆತ್ಮ ಕಾರಕನಾದ ರವಿಗೆ ಆರೋಗ್ಯ ದಾಯಕ ಹಾಗೂ ಆಯುಷ್ಯದಾಯಕ** ಗ್ರಹವೆಂದು ಪರಿಗಣಿಸಲ್ಪಟ್ಟಿದೆ. ಆದುದರಿಂದ ಜಾತಕದಲ್ಲಿ ರವಿಯು ಬಲಾಢ್ಯನಿದ್ದರೆ, ಸದೃಢ ಪ್ರಕೃತಿಯವ ನಿರುತ್ತಾನೆ. ಆದ್ದರಿಂದ ರವಿಯು ಬಲಾಢ್ಯನಿದ್ದರೆ ೨ ಗುಣಗಳು ಬರುತ್ತವೆ. ಬಲಾಢ್ಯನೆಂದರೆ ರಾಶಿ ಬಲದವನೂ, ಸ್ಥಾನಬಲದವನೂ, ಯೋಗಕಾರಕನೂ ಇರಬೇಕು. ರವಿಯು ದುರ್ಬಲನಿದ್ದರೆ, ನಿರ್ಬಲನಿದ್ದರೆ ಶನಿ ದೃಷ್ಟಿತನಿದ್ದರೆ ಶೂನ್ಯಗುಣವಿರುತ್ತದೆ. ರವಿಯು ಕೇವಲ ರಾಶಿ ಬಲದವನಿದ್ದು, ಸ್ಥಾನ ಬಲವಿಲ್ಲದಿದ್ದರೆ ೧ ಗುಣ. ಇದರಂತೆ ಕೇವಲ ಸ್ಥಾನಬಲದವನಿದ್ದು, ರಾಶಿ ಬಲದವನಿಲ್ಲದಿದ್ದರೂ ಕೂಡ ೧ ಗುಣ ಬರುತ್ತದೆ.

**ಆ) ಚಂದ್ರನ ನೋಟದಿಂದ :**

ಯಾರೊಬ್ಬರ ಆರೋಗ್ಯದ ಹಾಗೂ ಆಯುರ್ವರ್ಧನದ ಬಗೆಗೆ ವಿಚಾರಿಸುವಾಗ, ಸೂರ್ಯನ ಬಲಾಬಲದ ನಂತರ ಜಾತಕದಲ್ಲಿ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕು. ಸೂರ್ಯನು ಪುರುಷ ಗ್ರಹ ವಿದ್ದರೆ ಚಂದ್ರನು ಸ್ತ್ರೀ ಗ್ರಹವು. ಸೂರ್ಯನು ಪಿತೃಕಾರಕನಿದ್ದರೆ ಚಂದ್ರನು ಮಾತೃಕಾರಕನು, ಸೂರ್ಯನು ಧನ ವಿದ್ಯುತ್ ವಿದ್ದರೆ, ಚಂದ್ರನು ರುಣವಿದ್ಯುತ್, ಸೂರ್ಯನು ಹಗಲಿನ ಕಾರಕವಿದ್ದರೆ ಚಂದ್ರನು ರಾತ್ರಿ ಕಾರಕನು, ಸೂರ್ಯನು ಆತ್ಮಕಾರಕನಿದ್ದರೆ, ಚಂದ್ರನು ಮನಸ್ಸಿನ ಕಾರಕನು, ಸುಖ-ದುಃಖ, ಲಾಭ-ಹಾನಿ ಮೊದಲಾದ ಭಾವನೆಗಳಿಗೆ ಚಂದ್ರನೇ ಕಾರ ಕನು. ಶರೀರದಲ್ಲಿಯ ಮನಸ್ಸು ಅತ್ಯಂತ ಮಹತ್ವದ ಜ್ಞಾನೇಂದ್ರಿಯವು, ಅಂತೆಯೇ ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ಎಂದು ಹೇಳಲಾಗಿದೆ. ಶರೀರಕ್ಕೆ ಬರುವ ಅನೇಕ ರೋಗಗಳು ಮನಸ್ಸಿನ ಮೇಲೆಯೇ ಅವಲಂಬಿಸಿರುತ್ತವೆ. ಇದಲ್ಲದೇ ಶರೀರದಲ್ಲಿಯ ಮಿದುಳು ಉದರ, ತುಟಿ, ಆಮಾಶಯ, ಗರ್ಭಾಶಯ, ವಕ್ಷಸ್ಥಳ, ಅನ್ನನಳಿಕೆ, ಮೂಗು ಶಿರ, ಧಮನಿ, ಸ್ತನ, ಮಜ್ಜಾ, ರಸ, ಸ್ಪರ್ಶಜನ್ಯ ಜ್ಞಾನ ಇವೆ ಮೊದಲಾದ

ಅವಯವಗಳ ಮೇಲೆ ಚಂದ್ರನ ಆಧಿಪತ್ಯವಿರುವದರಿಂದ ಈ ಅವಯವಗಳಿಗೆ ಸಂಬಂಧಿಸಿದ ವಿಕಾರಗಳಿಗೆ ರೋಗಗಳಿಗೆ ಚಂದ್ರನೇ ಕಾರಕನು.

ಚಂದ್ರನು ಸ್ತ್ರೀಕಾರಕನಿರುವದರಿಂದ ಸ್ತ್ರೀಯರಿಗೆ ಬರುವ ಎಲ್ಲ ರೋಗಗಳಿಗೂ ಚಂದ್ರನೇ ಕಾರಕನು. ಆದರಲ್ಲಿಯೂ ಬಾಣಂತಿ ಯರಿಗೆ ಬರುವ ರೋಗಗಳಿಗೆಲ್ಲ ಚಂದ್ರನೇ ಕಾರಕನು. ಚಂದ್ರನು ದುರ್ಬಲನಿರುವ (ಸ್ತ್ರೀರೋಗಿಗಳು) ಸ್ತ್ರೀಯರು ಹಡೆಯುವ ಸಮಯದಲ್ಲಿ ಮರಣ ಹೊಂದಿದ ಅನೇಕ ಸ್ತ್ರೀಯರ ಜಾತಕ ನೋಡಿದ ಅನುಭವವಿದೆ. ಇದೂ ಅಲ್ಲದೇ ಸಣ್ಣ ಕೂಸುಗಳಿಗೆ ಮತ್ತು ಚಿಕ್ಕ ಮಕ್ಕಳಿಗೆಲ್ಲ ಚಂದ್ರನೇ ಕಾರ ಕನು ಆದ್ದರಿಂದ ಸಣ್ಣಮಕ್ಕಳಿಗೆ ಬರುವ ಎಲ್ಲ ರೋಗಗಳಿಗೂ ಚಂದ್ರನೇ ಕಾರ ಕನು. ಹೇಗೆ ತ್ರಿದೋಷಗಳು ಕುಪಿತರಾಗದೇ ಮರಣ ಸಂಭವಿಸುವದಿಲ್ಲವೋ ಹಾಗೆ ಚಂದ್ರನು ದುರ್ಬಲನೂ, ದೂಷಿತನೂ ಇರದೆ ಬಾಲಾರಿಷ್ಟ ಉಂಟಾಗ ಲಾರದು. ಅಂತೆಯೇ ನಮ್ಮ ಪೂರ್ವಜರು, ಹಳೆಯ ಜ್ಯೋತಿಷಿಗಳು ಜಾತಕ ಕೈಯಲ್ಲಿ ಹಿಡಿದ ಕೂಡಲೆ ಕೂಸಿನ ಜಾತಕಕ್ಕೆ ಬಾಲಾರಿಷ್ಟಯೋಗ ವಿದೆಯೋ ಹೇಗೆ ಎಂಬುದನ್ನು ಪ್ರಪ್ರಥಮವಾಗಿ ಪರಿಶೀಲಿಸುತ್ತಾರೆ. ಏಕೆಂದರೆ ಮಗುವಿನ ಎಂಟು ವರ್ಷದವರೆಗೆ ಬಾಲಾರಿಷ್ಟ ದೋಷವಿರುತ್ತದೆ. ಅಂತೆಯೇ ನಮ್ಮ ಅನೇಕ ಜೋತಿಷಿ ಬಂಧುಗಳು ಮಗುವಿನ ನಾಲ್ಕು ವರುಷದವರೆಗೆ ಜಾತಕ ತಯಾರಿಸುವುದಿಲ್ಲ ಹಾಗೂ ಪರಿಶೀಲಿಸುವುದಿಲ್ಲ, ಆದುದರಿಂದ ಜಾತಕವಲ್ಲಿ ಚಂದ್ರನು ಬಲಾಢ್ಯನಿದ್ದರೆ ೨ ಗುಣಗಳು ಬರುತ್ತವೆ. ಬಲಾಢ್ಯನೆಂದರೆ, ರಾಶಿಬಲದವನೂ, ಸ್ಥಾನಬಲದವನೂ, ಯೋಗಕಾರಕನೂ ಇರಬೇಕು. ಅಂದರೆ ಮಾತ್ರ ೨ ಗುಣಗಳು. ಆದರೆ ಅದೇ ಚಂದ್ರನು ದುರ್ಬಲನು ನಿರ್ಬಲನು ಬಲಹೀನನು ಇದ್ದರೆ ಶೂನ್ಯ ಗುಣಗಳು. ದುರ್ಬಲ ನಿರ್ಬಲ ಇವುಗಳ ಅರ್ಥ ವಿವರಣೆ ನಮ್ಮ ವ್ಯವ ಸಾಯಿ ಜ್ಯೋತಿಷಿಗಳಿಗೆ ಹೇಳುವುದು ಅವಶ್ಯಕತೆ ವಿರುವುದಿಲ್ಲ. ಆದಾಗ್ಯೂ ಸಂಕ್ಷಿಪ್ತದಲ್ಲಿ ಹೇಳಬೇಕೆಂದರೆ, ಚಂದ್ರನು ಪಾಪಗ್ರಹ ಮಧ್ಯ, ಪಾಪಗ್ರಹ ದೃಷ್ಟಿಸ ಪಾಪಗ್ರಹಯುಕ್ತ, ನೀಚರಾಶಿ ಶತ್ರುಕ್ಷೇತ್ರಿ ಇದ್ದರೆ, ಕ್ಷೀಣಚಂದ್ರ ನಿದ್ದರೆ, ಕ್ಷೀಣಚಂದ್ರನೆಂದರೆ, ವದ್ಯದಶಮಿಯಿಂದ ಶುದ್ಧ ಪಂಚಮಿ ವರೆಗೆ

ಇವೇ ಮೊದಲಾದ ದುರ್ಬಲ ಚಂದ್ರನಿದ್ದರೆ ಶೂನ್ಯಗುಣ ಬರುತ್ತದೆ. ಆದರೆ ಚಂದ್ರನು ಕೇವಲ ಸ್ಥಾನಬಲದವನಿದ್ದು, ರಾಶಿ ಬಲದವನಿಲ್ಲದಿದ್ದರೆ ೧ ಗುಣವು ಬರುತ್ತದೆ. ಇದರಂತೆ ಚಂದ್ರನು ಕೇವಲ ರಾಶಿಬಲದವನಿದ್ದು ಸ್ಥಾನಬಲದವನಿದ್ದರೂ ೧ ಗುಣ ಬರುತ್ತದೆ.

ಹೀಗೆ ಮೇಲೆ ವಿವರಿಸಿದ ಐದು ಸಂಗತಿಗಳಿಂದ ವಿಮರ್ಶಿಸಿ ವಿಂಗಡಿಸಿ ಗುಣಮಾಪನ ಮಾಡಬೇಕು.

**ಆಯುರ್ಮಾನದ ವಿಷಯವಾಗಿ :**

ಆಯುರ್ಮಾನದ ವಿಷಯವಾಗಿ ನಾವು ಬರೆದು ಪ್ರಕಟಿಸಿದ **ಆರೋಗ್ಯ ಜ್ಯೋತಿಷ್ಯ** ಈ ಗ್ರಂಥದ ೩ ನೇ ಅಧ್ಯಾಯದ ೨೭ ನೇ ಪುಟ ದಿಂದ ೩೭ ನೇ ಪುಟದವರೆಗಿನ ೧೦ ಪುಟಗಳಲ್ಲಿ ವಿವರ ವಿವರವಾಗಿ ವಿವರಿಸ ಲಾಗಿದ್ದು, ಅದನ್ನು ಓದಿದಲ್ಲಿ ಈ ವಿಷಯದ ಜ್ಞಾನವಾಗುತ್ತದೆ. ಪ್ರಸ್ತುತಃ ಈ ವಿಷಯಕ್ಕೆ ಬೇಕಾಗಬಹುದಾದ ವಿಷಯದ ಚೌಕಟ್ಟಿನಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ.

ಆಯುರ್ಮಾನದ ವಿಷಯವಾಗಿ ವಿಚಾರಿಸುವಾಗ ಸ್ಥೂಲವಾಗಿ ಮೂರು ರೀತಿಯಿಂದ ವಿಂಗಡಿಸಬಹುದು. ೧) ಅಲ್ಪಾಯು, ೨) ಮಧ್ಯ ಮಾಯು, ೩) ದೀರ್ಘಾಯು.

೧) ಅಲ್ಪಾಯುವೆಂದರೆ, ೮ ರಿಂದ ೩೨ ವಯಸ್ಸಿನವರೆಗೆ. ೨) ಮಧ್ಯ ಮಾಯುವೆಂದರೆ ೩೩ ರಿಂದ ೭೦ ರ ವರೆಗೆ. ೩) ದೀರ್ಘಾಯುವೆಂದರೆ ೭೦ ರ ಮೇಲೆ ಬದುಕುವುದು. ಅರ್ಥಾತ್ ೭೦ ರಿಂದ ೧೨೦ ವರ್ಷದ ವರೆಗೆ. ಇನ್ನು ಜನನದಿಂದ ೮ ವರ್ಷದವರೆಗೆ ಬಾಲಾರಿಷ್ಟಯೋಗವಿರು ತ್ತದೆ. ಅದರಲ್ಲಿಯೂ ಜನನದಿಂದ ೪ ವರ್ಷದವರೆಗಿನ ಆಯುಷ್ಯವು ಕೂಸಿನ ಮಾತೃವಿನ ಗ್ರಹವನ್ನು ಅವಲಂಬಿಸಿರುತ್ತದೆ.

ಆಯುರ್ಮಾನದ ಬಗೆಗೆ ವಿಚಾರಿಸುವಾಗ ಮೂರು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ೧) ಗ್ರಹ, ೨) ಸ್ಥಾನ, ೩) ಯೋಗಗಳು.

ಈ ಮೂರೂ ಸಂಗತಿಗಳಿಂದ ಯಾರೊಬ್ಬರ ಆಯುರ್ಮಾನ ವಿಷಯವಾಗಿ ತಿಳಿಯುತ್ತದೆ.

**ಗ್ರಹ** :— ಯಾರೊಬ್ಬರ ಆರೋಗ್ಯದ ಬಗೆಗೆ ವಿಚಾರಿಸುವಾಗ ಸೂರ್ಯ–ಚಂದ್ರರ ಬಲಾಬಲವನ್ನು ಮಾತ್ರ ಪರಿಶೀಲಿಸಬೇಕಾಗುತ್ತದೆ. ಆದರೆ ಯಾರೊಬ್ಬರ ಆಯುರ್ಮಾನದ ವಿಷಯವಾಗಿ ಪರಿಶೀಲಿಸುವಾಗ, ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಜನನದಿಂದ ೮ ವರುಷದ ವರೆಗೆ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಚಂದ್ರನು ದುರ್ಬಲನೂ ನಿರ್ಬಲನೂ ಇರದೇ ಯಾವ ಮಕ್ಕಳಿಗೂ ಬಾಲಾರಿಷ್ಟ ಬರಲಾರದು. ಇದರಂತೆ ಮಗುವಿನ ೪ ವರುಷದವರೆಗೆ ತಾಯಿಯ ಗ್ರಹಗತಿಯನ್ನು ಅವಲಂಬಿಸಿರುವುದರಿಂದ ಮಾತೃಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಆದುದರಿಂದ ಜಾತಕದಲ್ಲಿ ಚಂದ್ರನು ನಿರ್ಬಲನಿದ್ದರೆ ಅಲ್ಪಾಯು. ಬಲಾಢ್ಯನಿದ್ದರೆ ದೀರ್ಘಾಯು, ಮಧ್ಯಮಾಯುವಿರುತ್ತಾನೆ. ೯ ರಿಂದ ೧೫ ವರುಷದವರೆಗೆ ಸೂರ್ಯನು ಆಯುಷ್ಯಕಾರಕ ಗ್ರಹನು. ೧೬ ರಿಂದ ೨೫ ರ ವರೆಗೆ ಮಂಗಳನು ಆಯುಷ್ಯಕಾರಕನು. ೨೬ ರಿಂದ ೪೦ ರ ವರೆಗೆ ಶುಕ್ರನು, ೪೦ ರಿಂದ ೫೦ ರ ವರೆಗೆ ಬುಧನು, ೫೦ ರಿಂದ ೭೦ ರ ವರೆಗೆ ಗುರುವು. ೭೦ ರ ಮೇಲೆ ಹಾಗೂ ೭೦ ರಿಂದ ೧೨೦ ವರುಷದ ವರೆಗೆ ಶನಿಯು ಆಯುಷ್ಯಕಾರಕರು ಇರುತ್ತಾರೆ. ಇದಲ್ಲದೇ ಕೆಲ ಅಲ್ಪಾಯುಗಳು, ಮಧ್ಯಮಾಯುಗಳು ದುರ್ಮರಣದಿಂದ ಸಾವನ್ನು ಅಪ್ಪುತ್ತಾರೆ. (ದುರ್ಮರಣ ಹೊಂದುತ್ತಾರೆ.) ದುರ್ಮರಣದಲ್ಲಿ ಅನೇಕ ಪ್ರಕಾರಗಳಿದ್ದರೂ ಮುಖ್ಯವಾಗಿ ೨ ಪ್ರಕಾರಗಳು. ೧) ಅಪಘಾತ, ೨) ಆತ್ಮಹತ್ಯೆ.

೧) **ಅಪಘಾತ** :— ನಾವೆ, ಹಡಗು, ಬೋಟು, ಡೋಣಿ ಮೊದಲಾದವುಗಳಿಂದ ಮುಳುಗಿ ದುರಂತಕ್ಕೀಡಾಗುವದು. ಸ್ಕೂಟರ, ಮೋಟರ, ಸೈಕಲ್, ಕಾರು, ಟ್ರಕ್ಕು, ಮೊದಲಾದ ವಾಹನಗಳಿಂದ ಅಪಘಾತಕ್ಕೀಡಾಗಿ ದುರ್ಮರಣ ಹೊಂದುವುದು. ಗಣಿ, ಕಾರಖಾನೆ, ವರ್ಕ

ಶಾಪ್, ಮಶೀನ ಶಾಪಗಳಲ್ಲಿ ಯಂತ್ರಗಳ ಸ್ಫೋಟದಿಂದಾಗಲಿ, ವಿದ್ಯುತ್ ಉಪಕರಣಗಳಿಂದಾಗಲಿ ಅಪಘಾತ ಹೊಂದುವುದು. ಬೆಂಕಿಯ ಅನಾಹುತ, ಗೋಡೆ ಕುಸಿಯುವಿಕೆ, ಪ್ರವಾಹ, ಬಿರುಗಾಳಿ ಮೊದಲಾದ ನೈಸರ್ಗಿಕ ಪ್ರಕೋಪದ ದುರಂತದಿಂದ ದುರ್ಮರಣ ಹೊಂದುವಿಕೆ. ಇವೇ ಮೊದಲಾದ ಅಪಘಾತಗಳಿಂದ ಮರಣ ಹೊಂದುವ ಅಲ್ಪಾಯುಗಳು, ಮಧ್ಯಮಾಯುಗಳು.

೨) ಆತ್ಮಹತ್ಯೆ : — ಉರುಲು ಹಾಕಿಕೊಳ್ಳುವಿಕೆ, ವಿಷ ತಗಣಿಪುಡಿ ತಿನ್ನುವಿಕೆ, ನಿದ್ರೆ ಗುಳಿಗೆ ಸೇವಿಸುವಿಕೆ, ಕೆರೆ ಭಾವಿಗಳಲ್ಲಿ ಬೀಳುವುದರಿಂದಾಗಲಿ, ರೈಲಿನ ಹಳಿಯ ಮೇಲೆ ಬೀಳುವುದಾಗಲಿ, ಎತ್ತರದ ಕಟ್ಟಡದಿಂದ ಕೆಳಗೆ ಬೀಳುವುದಾಗಲಿ, ಬೆಂಕಿಯನ್ನು ಹಚ್ಚಿಕೊಂಡು ಸಾಯುವುದಾಗಲಿ ಇವೇ ಮೊದಲಾದ ರೀತಿಯ ಆತ್ಮಹತ್ಯೆಯಿಂದ ದುರ್ಮರಣಕ್ಕೆ ಈಡಾಗುವರು. ಎರಡನೇ ವರ್ಗದವರು.

ಹೀಗೆ ದುರ್ಮರಣವನ್ನು ಎರಡು ರೀತಿಯಿಂದ ವಿಂಗಡಿಸಬಹುದು. ಯಾವುದೇ ಪ್ರಕಾರದ ದುರ್ಮರಣವಾಗಲಿ, ಈ ದುರ್ಮರಣಕಾರಕ ಅಶುಭ ಯೋಗವಿರದೇ ಯಾರೂ ದುರ್ಮರಣ ಹೊಂದಲಾರರು. ಇಂಥ ಅಶುಭ ಯೋಗಗಳಿದ್ದವರು ಹೆಚ್ಚಾಗಿ ಅಲ್ಪಾಯುಗಳಾಗಿರುತ್ತಾರೆ. ಇನ್ನು ಕೆಲವರು ಮಧ್ಯಮಾಯುಗಳೂ, ದೀರ್ಘಾಯುಗಳೂ ಕೂಡ ಇಂಥ ದುರ್ಮರಣಗಳಿಗೆ ಒಳಗಾಗುತ್ತಾರೆ. ಆದರೆ ಒಂದು ಸಂಗತಿ ಮಾತ್ರ ನಿಜ. ಹೇಗೆ ಚಂದ್ರನು ದುರ್ಬಲನಿರದೆ ಬಾಲಾರಿಷ್ಟಯೋಗವಿರುವುದಿಲ್ಲವೋ ಹಾಗೆ ಮಂಗಳನು ದೂಷಿತನಿರದೇ ಯಾರೂ ಅಘಘಾತಾದಿಗಳನ್ನು ಹೊಂದಲಾರರು. ಅದರಲ್ಲಿಯೂ ಶನಿ–ಮಂಗಳರ ಯುತಿಯೋಗ, ಪ್ರತಿಯೋಗ, ದೃಷ್ಟಯೋಗ ಮೊದಲಾದ ಅಶುಭಯೋಗಗಳಿದ್ದರೆ ಮಾತ್ರ ಅಘಘಾತಾದಿಗಳು ಜರುಗುವುದು ನಿಶ್ಚಿತ. ಮಂಗಳನ ತರುವಾಯ ರಾಹುಗ್ರಹ ಕೂಡ ಅಘಘಾತಾದಿಗಳಿಗೆ ಕಾರಕನು. ರವಿಯು ದೂಷಿತನಿದ್ದರೆ ಕೊಲೆ, ಜೇಲು ರಾಜಕೀಯ

ಪಕ್ಷಗಳಿಂದ, ರಾಜಕಾರಣಗಳಿಂದ, ಅಧಿಕಾರಿಗಳಿಂದ, ದುರ್ಮರಣ ಹೊಂದುವರು.

ಯಾವುದೇ ಪ್ರಕಾರದ ಆತ್ಮಹತ್ಯೆಯಿಂದ ದುರ್ಮರಣಕಾರಕ ಗ್ರಹ ವೇದರೆ ಚಂದ್ರನು. ಏಕೆಂದರೆ ಚಂದ್ರನು ಮನಸ್ಸಿನ ಕಾರಕನು. ಮನಸ್ಸು ಅಸ್ಥಿರ ಚಂಚಲ ದುರ್ಬಲವಾಗದೆ ಆತ್ಮಹತ್ಯೆಯಾಗಲಾರದು. ಹಾಗೂ ಚಂದ್ರನು ದೂಷಿತನಿರದೇ ಯಾರೂ ಆತ್ಮಹತ್ಯೆ ಮಾಡಿಕೊಳ್ಳಲಾರರು. ಚಂದ್ರನ ತರುವಾಯ ಬುಧನು ಆತ್ಮಹತ್ಯೆಯ ಕಾರಕ ಗ್ರಹನು. ಆದುದರಿಂದ ಚಂದ್ರನು ದೂಷಿತನಿದ್ದರೆ ಅಲ್ಪಾಯು. ಚಂದ್ರನು ಬಲಾಢ್ಯನಿದ್ದರೆ ಮಧ್ಯಮಾಯು, ದೀರ್ಘಾಯು. ಆದುದರಿಂದ ಆಯುರ್ಮಾನ ಬಗೆಗೆ ತೀರ್ಮಾನ ಮಾಡುವ ಮೊದಲು ಅನೇಕ ಗ್ರಹಗಳ ಬಲಾಬಲವನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು.

## ೨) ಸ್ಥಾನದ ಮೇಲಿಂದ :

ಜಾತಕನು ತನು (ಲಗ್ನ) ಸ್ಥಾನದ ಮೇಲಿಂದ ಜಾತಕನ ಸಾಮಾನ್ಯ ಆರೋಗ್ಯದ ಬಗೆಗೆ ತಿಳಿಯುತ್ತದೆ. ಇದರಂತೆ ಷಷ್ಠಸ್ಥಾನದ ಮೇಲಿಂದ ಯಾರೊಬ್ಬರಿಗೆ ಯಾವ ಪ್ರಕಾರದ ರೋಗ ತಗಲಬಹುದು ? ಅದರಲ್ಲಿಯೂ ತೀವ್ರ ಬಾಧೆಯ ರೋಗದ ಕಲ್ಪನೆ ಬರುತ್ತದೆ. ಇದರಂತೆ ದ್ವಾದಶ ಸ್ಥಾನದ ಮೇಲಿಂದ ಹಳೆಯ ತರಹದ ರೋಗದ ಕಲ್ಪನೆ ಬರುತ್ತದೆ. ಆದರೆ ಯಾರೊಬ್ಬರ ಆಯುರ್ಮಾನದ ಬಗೆಗೆ ಅರಿಯಲು ಅಷ್ಟಮಸ್ಥಾನವನ್ನೇ ಪರಿಶೀಲಿಸಬೇಕಾಗುತ್ತದೆ. ಅಂತೆಯೇ ಇದಕ್ಕೆ ಮೃತ್ಯುಸ್ಥಾನ ಎನ್ನುತ್ತಾರೆ. ಅಷ್ಟಮಸ್ಥಾನ ಅಷ್ಟಮೇಶರು ನಿರ್ಬಲ ದುರ್ಬಲ ದೂಷಿತನಿರದೇ ಯಾರೂ ಅಲ್ಪಾಯುವಾಗಲಾರರು ಹಾಗೂ ಅಷ್ಟಮಸ್ಥಾನ ಅಷ್ಟಮೇಶ ಬಲಾಢ್ಯರಿದ್ದ ಜಾತಕನು ದೀರ್ಘಾಯು ಮಧ್ಯಮಾಯು ಇರುತ್ತಾನೆ. ಅಷ್ಟಮ ಸ್ಥಾನದ ನಂತರ ಚತುರ್ಥ ಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಚತುರ್ಥ ಸ್ಥಾನವಿದು ಹೃದಯ, ಪುಪ್ಪುಸದ ಸ್ಥಾನವಿರುತ್ತದೆ. ಅಘಘಾತಾದಿಗಳಿಂದ ದುರ್ಮರಣ ಹೊಂದುವವರ ಜಾತಕದಲ್ಲಿ ಅಷ್ಟಮ ಹಾಗೂ ಚತುರ್ಥ ಸ್ಥಾನ

ಗಳು ದೂಷಿತವಿರುತ್ತವೆ. ಆದರೆ ಆತ್ಮಹತ್ಯೆಯಿಂದ ದುರ್ಮರಣ ಹೊಂದುವವರ ಜಾತಕದಲ್ಲಿ ಅಷ್ಟಮಸ್ಥಾನ ಚತುರ್ಥ ಸ್ಥಾನಗಳ ಸಂಗಡ ತನು ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ತನುಸ್ಥಾನ ಹಾಗೂ ಚತುರ್ಥಸ್ಥಾನಗಳು ಮನಸ್ಸಿನ ಸ್ಥಾನಗಳು. ಅದರಲ್ಲಿಯೂ ತನು ಸ್ಥಾನವು ಹೆಚ್ಚು. ಇದಲ್ಲದೆ ಈ ಮೂರು ಸ್ಥಾನಗಳ ಸ್ಥಾನಾಧೀಶರ ಬಲಾ ಬಲವನ್ನು ಪರಿಶೀಲಿಸಬೇಕು. ಏಕೆಂದರೆ **ಸ್ಥಾನಗಳಲ್ಲಿಯ ಗ್ರಹಗಳಿ ಗಿಂತ ಸ್ಥಾನಾಧೀಶರ ಬಲಾಬಲದ ಕಡೆಗೆ ಹೆಚ್ಚು ಮಹತ್ವ ಕೊಡ ಬೇಕು.** ಅದರಲ್ಲಿಯೂ ಆಯುರ್ಮಾನದ ವಿಷಯವಾಗಿ ನಿರ್ಧರಿಸುವಾಗ ಅಷ್ಟಮೇಶ, ಲಗ್ನೇಶ, ಚತುರ್ಥೇಶ, ದ್ವಾದಶೇಶ ಈ ನಾಲ್ಕು ಸ್ಥಾನಾಧೀಶರ ಬಲಾಬಲದ ಮೇಲಿಂದ ಯಾರೊಬ್ಬರ ಆಯುರ್ಮಾನದ ವಿಷಯವಾಗಿ ನಿರ್ಧರಿಸಬೇಕಾಗುತ್ತದೆ.

## ೩) ಯೋಗಗಳ ಮೇಲಿಂದ :

ಅಲ್ಪಾಯು, ಮಧ್ಯಮಾಯು, ದೀರ್ಘಾಯು ಇವೇ ಮೊದಲಾದ ಆಯುರ್ದಾಯ ಆಯುರ್ಮಾನದ ವಿಷಯವಾಗಿ ನಮ್ಮ **ಆರೋಗ್ಯ ಜ್ಯೋತಿಷ್ಯ** ಗ್ರಂಥದ ೩ ನೇ ಅಧ್ಯಾಯದ ೨೭ ನೇ **ಪುಟದಿಂದ** ೩೭ ನೇ ಪುಟದ ವರೆಗಿನ ಹತ್ತು ಪುಟಗಳಲ್ಲಿ ಸುದೀರ್ಘವಾಗಿ ವಿವರಿಸಲಾಗಿದೆ, ಪ್ರಸ್ತುತಃ ಈ ಗ್ರಂಥದ ಈ ಅಧ್ಯಾಯದ ವ್ಯಾಪ್ತಿ ದೃಷ್ಟಿಯಿಂದ, ಮಹತ್ವದ ದೃಷ್ಟಿಯಿಂದ ಕೆಲ ಯೋಗಗಳ ಉಲ್ಲೇಖ ಮಾತ್ರ ಈ ಕೆಳಗಿನಂತೆ ವಿವರಿಸ ಲಾಗಿದೆ.

೧) ರವಿ, ಚಂದ್ರ, ಅಷ್ಟಮೇಶ, ಷಷ್ಠೇಶ, ಲಗ್ನೇಶ ಈ ಸಂಗತಿ ಗಳು ಬಲಾಢ್ಯವಿದ್ದರೆ ದೀರ್ಘಾಯುಷಿಗಳಿರುತ್ತಾರೆ.

೨) ರವಿ, ಚಂದ್ರ, ಅಷ್ಟಮೇಶ, ಷಷ್ಠೇಶ, ಲಗ್ನೇಶ ಈ ಐದು ಸಂಗತಿಗಳು ದುರ್ಬಲರು ನಿರ್ಬಲರಾಗಿದ್ದವರು, ಅಲ್ಪಾಯುಗಳು.

೩) ರವಿ, ಅಷ್ಟಮೇಶ, ಷಷ್ಠೇಶರು ಈ ಮೂರು ಸಂಗತಿಗಳು ಬಲಾಢ್ಯರಿದ್ದವರು ಮಧ್ಯಮಾಯುಗಳು.

೪) ಲಗ್ನ, ಲಗ್ನೇಶ, ಅಷ್ಟಮ, ಅಷ್ಟಮೇಶ, ಷಷ್ಠ ಷಷ್ಠೇಶ, ರವಿ, ಚಂದ್ರ ಈ ಎಂಟು ಸಂಗತಿಗಳು ದೂಷಿತವಿದ್ದರೆ ಬಾಲಾರಿಷ್ಟವು.

೫) ಶನಿ–ಮಂಗಳ, ಶನಿ–ಚಂದ್ರ, ಚಂದ್ರ–ರಾಹು, ರವಿ–ಶನಿ ಈ ಗ್ರಹಗಳ ಯುತಿಯೋಗ ಪ್ರತಿಯೋಗ ದೃಷ್ಟಿಯೋಗವು ಲಗ್ನ, ಚತುರ್ಥ, ಅಷ್ಟಮ, ವ್ಯಯ, ಷಷ್ಠ ಈ ಸ್ಥಾನಗಳಿದ್ದರೆ ದುರ್ಮರಣವಾಗಬಹುದಾಗಿದೆ.

ಹೀಗೆ ಗ್ರಹಯೋಗಗಳನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು.



## ೨

# ಮಾತೃ ಸೌಖ್ಯ

### ಗುಣಗಳು ೧೫

ಆರೋಗ್ಯ ಹಾಗೂ ಆಯುರ್ದಾಯದ ಬಗೆಗೆ ಅಧ್ಯಯನ ಮಾಡಿದ ನಂತರ ಗುಣಮಾಪನ ಮಾಡುವ ವಿಧಾನ ತಿಳಿದುಕೊಂಡ ನಂತರ ಎರಡನೇ ಅಧ್ಯಾಯದಲ್ಲಿ ಮಾತೃಸೌಖ್ಯದ ಬಗೆಗೆ ವಿವೇಚಿಸೋಣ. ಕುಂಡಲಿ ಗುಣ ನಿರ್ಣಯದಲ್ಲಿ ಮಾತೃಸೌಖ್ಯಕ್ಕೆ ಬಹಳ ಮಹತ್ವದ ಸ್ಥಾನವಿದೆ.

ತೊಟ್ಟಿಲನ್ನು ತೂಗುವ ಕೈ ಜಗತ್ತನ್ನು ಆಳುತ್ತದೆ ಎಂಬ ಉಕ್ತಿ ಇದೆ. ಈ ಉಕ್ತಿಯ ಸಂಕೇತಾರ್ಥವನ್ನು ನಾವು ಅರಿಯಬೇಕು. ತಾಯಿ ಹೊತ್ತು ಹೆತ್ತು ಸಾಕಿದ ಮಗು ಜಗತ್ತನ್ನು ಆಳಿದರೆ, ತಾಯಿಯೇ ಜಗತ್ತನ್ನು ಆಳಿ ದಂತೆ ಅಲ್ಲವೆ ? ವೀರ ಮಾತೆಯರಾದ ಜೀಜಾಬಾಯಿ ಮುಂತಾದವರ ಪಾತ್ರವನ್ನು ಅಧ್ಯಯನ ಮಾಡಿದಾಗ ಮೇಲೆ ಉಲ್ಲೇಖಿಸಿದ ಉಕ್ತಿಯ ಸಂಕೇ ತಾರ್ಥದ ಅರಿವಾಗುತ್ತದೆ.

ಯಾವುದೇ ಜಾತಕನು ಭೂಮಿಯಲ್ಲಿ ಜನ್ಮ ತಾಳಬೇಕಾದರೆ ಆ ಜಾತಕ ನನ್ನು ನವಮಾಸಗಳ ಬಸಿರ ಹೊತ್ತು ಹೆತ್ತ ತಾಯಿಯೇ ಕಾರಣವಲ್ಲವೇ ? ಜನಿಸಿದ ಮಗುವನ್ನು ಜೋಪಾನ ಮಾಡಿ ಬೆಳೆಸುವುದು ತಾಯಿ ಅಲ್ಲವೇ ? "ಮಾತೃದೇವೋಭವ'' ಎಂಬ ಉಕ್ತಿ ಇದ್ದಂತೆ, ತಾಯಿಗಿಂತ ಬಂಧುವಿಲ್ಲ,

ಉಪ್ಪಿಗಿಂತ ರುಚಿ ಇಲ್ಲ ಎನ್ನುವ ಉಕ್ತಿಯು ಇದೆ. ತಾಯಿಯೇ ಮೊದಲ ಗುರು ಎಂಬ ಉಕ್ತಿಯು ಇದೆ. ತಿನ್ನುವ ಉಣ್ಣುವದರಿಂದ ಹಿಡಿದು ಬದುಕುವ ಬಗೆಗೆ ಪ್ರಥಮ ಪಾಠವನ್ನು ಕಲಿಸುವವಳು ತಾಯಿಯೇ ಅಲ್ಲವೇ ? ಹುಟ್ಟಿದ ಕೂಸು ಅಳುತ್ತದೆ. ಹೊಟ್ಟೆ ಮೊದಲು ಮೊರೆ ಹೋಗುವುದು ತಾಯಿಯನ್ನೇ. ಅದರ ಮೊದಲ ಮಾತು 'ಅವ್ವಾ'. ಅವ್ವಾ ಅಂದರೆ ಮಾತೆ ಅಲ್ಲವೆ ? ತೊದಲುವ ಕೂಸಿಗೆ (ಮಗುವಿಗೆ) ಮಾತು ಕಲಿಸಿದವಳು ಮಾತೆಯಲ್ಲವೆ ? ಜೀವನದ ತಪ್ಪು ಒಪ್ಪುಗಳನ್ನು ತಿಳಿಹೇಳುವವಳೇ ತಾಯಿ. ತಾಯಿಯು ಕೂಸನ್ನು ಜೋಪಾನ ಮಾಡುವಾಗ ಏನನ್ನಾದರೂ ತಪ್ಪು ಮಾಡಿದರೆ, ಕೂಸಿನ ಜೀವಕ್ಕೆ ಅಪಾಯವಾಗಿ ಆ ಮಗುವಿನ, ಆ ಜಾತಕನ ಆಯುಷ್ಯವೇ ಅಂತಿಮವಾಗುತ್ತದೆ. ತಾಯಿಯು ಕೂಸನ್ನು ದೈಹಿಕವಾಗಿ ಬೆಳೆಸಿ, ಮಾನಸಿಕವಾಗಿ ಸೂಕ್ತ ತರಬೇತಿ ಕೊಡದಿದ್ದರೆ, ಆ ಕೂಸು ಬೆಳೆದು ಸಮಸ್ಯಾ ಪೂರಿತ ಕೂಸಾಗುವ ಸಾಧ್ಯತೆಯಿದೆ. ಅಷ್ಟೇ ಏಕೆ ಮಗುವಿದ್ದಾಗ ತಾಯಿಯ ಸೌಖ್ಯವಿಲ್ಲದಿದ್ದರೆ, ಆ ಮಗುವಿನ ವಯೋಮಾನದಂತೆ ದೈಹಿಕ ಬೆಳವಣಿಗೆಯಲ್ಲಿ ಕುಂಠಿತವಾಗುತ್ತದೆ. ಇಷ್ಟೇ ಅಲ್ಲಾ ಮುಂದೆ ಆ ಮಗುವಿನ ಶಿಕ್ಷಣ, ಉದ್ಯೋಗಕ್ಕೂ ತೊಂದರೆ ಉಂಟಾಗುತ್ತದೆ. ಆದ್ದರಿಂದ ತಂದೆ – ತಾಯಿಗಳ ಮನಸ್ತಾಪದಿಂದ (ಬ್ರೋಕನ್ ಫ್ಯಾಮಿಲಿ) ಅರ್ಥಾತ್ ಪತಿ–ಪತ್ನಿಯರು ಪ್ರತ್ಯೇಕವಾಗಿ ವಾಸಿಸುತ್ತಿದ್ದರೆ, ಘಟಸ್ಫೋಟ ಮಾಡಿಕೊಂಡಿದ್ದರೆ ಅಂಥ ಮಕ್ಕಳ ದೈಹಿಕ, ಮಾನಸಿಕ, ಶೈಕ್ಷಣಿಕ ಬೆಳವಣಿಗೆಗೆ ತೊಂದರೆಗೊಳಗಾದ ನೂರಾರು ಉದಾಹರಣೆಗಳನ್ನು ನೋಡಿದ ಅನುಭವವಿದೆ. ಮಲತಾಯಿಯರ ಉಪಟಳದಿಂದ ತೊಂದರೆಗೊಳಗಾದ ಅನೇಕ ಮಕ್ಕಳನ್ನು ನೋಡಿದ ಉದಾಹರಣೆಗಳಿವೆ.

ಒಟ್ಟಿನಲ್ಲಿ ತಾಯಿಯು ಜಾತಕನ ಸರ್ವತೋಮುಖ ಬೆಳವಣಿಗೆಗೆ ಜಾತಕನ ಉತ್ತಮ ಭವಿತವ್ಯಕ್ಕೆ, ಯಶಸ್ಸಿಗೆ ಕಾರಣಗಳು. ಅಂತೆಯೇ ಕುಂಡಲಿ ಗುಣ ನಿರ್ಣಯದಲ್ಲಿ ಮಾತೃಸೌಖ್ಯಕ್ಕೆ ಹೆಚ್ಚಿನ ಮಹತ್ವ ಕೊಡಲಾಗಿದ್ದು, ಇದಕ್ಕೆ ೧೫ ಗುಣಗಳನ್ನು ಮೀಸಲಾಗಿದ್ದು, ಮಾತೃಸೌಖ್ಯವಿರುವ ಜಾತಕದ ಗ್ರಹಸ್ಥಿತಿ ಹೇಗಿರುತ್ತದೆ. ಮಾತೃಸೌಖ್ಯ ಅಭಾವವಿರುವ

ಜಾತಕನ ಗ್ರಹಸ್ಥಿತಿ ಹೇಗಿರುತ್ತದೆ, ಮಾತೃಸೌಖ್ಯದ ಗುಣಮಾಪನ ಹೇಗೆ ಮಾಡಬೇಕು ಎಂಬುದನ್ನು ಪರಿಶೀಲಿಸುವಾ.

ಮಾತೃಸೌಖ್ಯದ ವಿಷಯವಾಗಿ ತಿಳಿಯಲು ನಾವು ಐದು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ, ೧) ಚತುರ್ಥ ಸ್ಥಾನ ಚತುರ್ಥೇಶ, ೨) ಚಂದ್ರ, ೩) ಶುಕ್ರ, ೪) ಗುರು, ೫) ಮಾತೃಸೌಖ್ಯದ ಪೋಷಕ ಹಾಗೂ ಮಾತೃಸೌಖ್ಯದ ಅಭಾವದ ಯೋಗಗಳು. ಈ ಐದು ಸಂಗತಿಗಳು ಪೂರಕವಿದ್ದರೆ ಹದಿನೈದು ಗುಣಗಳಿಗೆ ಹದಿನೈದು ಗುಣಗಳು ಬರುತ್ತವೆ. ಆದರೆ ಈ ಐದು ಸಂಗತಿಗಳು ಪ್ರತಿಕೂಲವಿದ್ದರೆ ಶೂನ್ಯ ಗುಣ ಬೀಳುತ್ತವೆ. ಇದರಲ್ಲಿ ೧–೨ ಸಂಗತಿಗಳು ಪೂರಕವಿದ್ದರೆ ಕಡಿಮೆ ಗುಣಗಳು ಬೀಳುತ್ತವೆ. ಅವುಗಳ ವಿವರಣೆ ಹೀಗಿದೆ.

## ೧) ಚತುರ್ಥಸ್ಥಾನದ ಮೇಲಿಂದ :

ಜಾತಕದಲ್ಲಿಯ ಚತುರ್ಥ ಸ್ಥಾನವು ಮಾತೃಸೌಖ್ಯದ ಪೋಷಕ ಪೂರಕ ಕಾರಕ ಸ್ಥಾನವು. ಆದುದರಿಂದ ಚತುರ್ಥಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ ಮಾತೃಸೌಖ್ಯ ಸಿಗುತ್ತದೆ. ಅದರಲ್ಲಿಯೂ ಶುಭ ಗ್ರಹಗಳಾದ ಚಂದ್ರ, ಶುಕ್ರ, ಗುರು ಈ ಮೂರು ಗ್ರಹಗಳಲ್ಲಿ ಯಾವುದಾದರೂ ಒಂದು ಗ್ರಹವು ಬಲಾಢ್ಯವಾಗಿ ಚತುರ್ಥದಲ್ಲಿದ್ದರೆ ಮಾತೃಸೌಖ್ಯ ಸಿಗುತ್ತದೆ ಹಾಗೂ 2 ಗುಣಗಳು ಲಭ್ಯವಿರುತ್ತವೆ. ಆದರೆ ಚತುರ್ಥದಲ್ಲಿ ಮಂಗಳ, ರಾಹು, ಶನಿ, ಕೇತು, ರವಿಗಳು ಈ ಐದು ಗ್ರಹಗಳು ಕ್ರಮಶಃ ಮಾರಕ ಗ್ರಹಗಳು. ಅದರಲ್ಲಿಯೂ ಮಂಗಳನು ಮಾತೃಸೌಖ್ಯಕ್ಕೆ ಬಹಳೇ ಮಾರಕ ಗ್ರಹವು. ಅರ್ಥಾತ್ ಮಾತೃಸೌಖ್ಯದ ಭಾವಕಾರಕ ಗ್ರಹನು. ಮಂಗಳನ ತರುವಾಯ ರಾಹು ಗ್ರಹವು ಮಾತೃಸೌಖ್ಯದ ಮಾರಕ ಗ್ರಹವು. ಆ ಬಳಿಕ ಶನಿ, ಕೇತು, ರವಿ ಗ್ರಹಗಳು ಕ್ರಮಶಃ ಮಾರಕರು. ಈ ಐದು ಗ್ರಹಗಳಲ್ಲಿ ಯಾವುದೇ ಗ್ರಹವಿದ್ದರೂ ಮಾತೃಸೌಖ್ಯಕ್ಕೆ ಅಭಾವವಿರುತ್ತದೆ. ಆದುದರಿಂದ ಶೂನ್ಯ ಗುಣಗಳು ಬರುತ್ತವೆ. ಅದರಲ್ಲಿಯೂ ಮಂಗಳ, ರಾಹು

ಗಳಿದ್ದರಂತೂ ಮಾತೃದ್ವೇಷಿಯು ಜಾತಕವು. ಬುಧನು ಚತುರ್ಥದಲ್ಲಿದ್ದರೆ ಮಾತೃಸೌಖ್ಯ ತಕ್ಕಮಟ್ಟಿಗೆ. ಅದರಲ್ಲಿಯೂ ರಾಶಿಬಲದವನು ಮಿತ್ರ ಕ್ಷೇತ್ರಿಯೂ ಇದ್ದರೆ ಮಾತೃಸೌಖ್ಯ ಸಿಗುತ್ತದೆ. ಶತ್ರುಕ್ಷೇತ್ರಿ ಶತ್ರುಮಧ್ಯ ಶತ್ರುಯುಕ್ತನಾಗಿ ಚತುರ್ಥದಲ್ಲಿದ್ದರೆ ಮಾತೃಸೌಖ್ಯ ಸಿಗಲಾರದು ಹಾಗೂ ಶೂನ್ಯಗುಣ ಲಭಿಸುತ್ತದೆ.

ಯಾವುದೇ ಗ್ರಹವು ಚತುರ್ಥೇಶರಾಗಿ ಬಲಾಢ್ಯರಿದ್ದರೆ, ಅಂದರೆ ರಾಶಿ ಬಲದವರೂ, ಸ್ಥಾನಬಲದವರೂ ಇದ್ದರೆ ಮಾತೃಸೌಖ್ಯ ಸಿಗುತ್ತದೆ. ಹಾಗೂ ೨ ಗುಣಗಳು ಲಭಿಸುತ್ತವೆ. ಅದರಲ್ಲಿಯೂ ಚಂದ್ರ, ಶುಕ್ರ, ಗುರುಗಳಿಗೆ ಚತುರ್ಥೇಶರಾಗಿ ಬಲಾಢ್ಯರಿದ್ದರೆ ಮಾತೃಸೌಖ್ಯ ಹೆಚ್ಚು ಲಭಿಸುತ್ತದೆ. ಆದರೆ ಪಾಪಗ್ರಹಗಳಾದ ರವಿ, ಮಂಗಳ,ಶನಿ, ರಾಹುಕೇತುಗಳು ಚತುರ್ಥೇಶರಾಗಿ ಬಲಾಢ್ಯರಿದ್ದರೆ ಸ್ಥಾನಬಲದಿಂದ ಮಾತ್ರ ಮಾತೃಸೌಖ್ಯ ಸಿಗುತ್ತದೆ. ಹಾಗೂ ಎರಡು ಗುಣಗಳು ಲಭಿಸುತ್ತವೆ.

ಚತುರ್ಥೇಶ ಬಲಾಢ್ಯನಾಗಿ, ಚತುರ್ಥದಲ್ಲಿದ್ದರಂತೂ ಯಾವುದೇ ಗ್ರಹ ಇದ್ದರೂ ಮಾತೃಸೌಖ್ಯ ಸಂಪೂರ್ಣವಾಗಿ ಸಿಗುತ್ತದೆ. ಆದುದರಿಂದ ಚತುರ್ಥ ಸ್ಥಾನದಲ್ಲಿ ಬಲಾಢ್ಯ ಗ್ರಹವು ಚತುರ್ಥೇಶನೂ ಬಲಾಢ್ಯನಿದ್ದರೆ ೪ ಗುಣಗಳು. ಆದರೆ ಕೇವಲ ಚತುರ್ಥದಲ್ಲಿ ಬಲಾಢ್ಯ ಗ್ರಹವಿದ್ದು ಚತುರ್ಥೇಶನು ನಿರ್ಬಲ ದುರ್ಬಲನಿದ್ದರೆ ೨ ಗುಣಗಳು. ಇದರಂತೆ ಚತುರ್ಥದಲ್ಲಿ ಪಾಪಗ್ರಹ ಚತುರ್ಥ ಸ್ಥಾನದಲ್ಲಿ ದೂಷಿತವಿದ್ದು, ಚತುರ್ಥೇಶನು ಬಲಾಢ್ಯನಿದ್ದರೂ ೨ ಗುಣಗಳು ಲಭಿಸುತ್ತವೆ.

### ೨) ಚಂದ್ರನ ಮೇಲಿಂದ :

ಮಾತೃಸೌಖ್ಯದ ಪೋಷಕ ಪೂರಕಕಾರಕಗ್ರಹವೆಂದರೆ ಚಂದ್ರನು ಜಾತಕದಲ್ಲಿ ಚಂದ್ರನು ಬಲಾಢ್ಯನಿದ್ದರೆ ಮಾತೃಸೌಖ್ಯ ಸಂಪೂರ್ಣ ಸಿಗುತ್ತದೆ. ಬಲಾಢ್ಯನೆಂದರೆ ರಾಶಿಬಲದವ, ಸ್ಥಾನಬಲದವ, ಯೋಗಕಾರಕ ಹೀಗಿದ್ದರೆ, ೪ ಗುಣಗಳು ಲಭಿಸುವವು. ಆದರೆ ಅದೇ ಚಂದ್ರನು ದುರ್ಬಲ ನಿರ್ಬಲನೂ ಇದ್ದರೆ ಶೂನ್ಯ ಗುಣಗಳು ಲಭಿಸುತ್ತವೆ. ದುರ್ಬಲ ನಿರ್ಬಲ ಚಂದ್ರನೆಂದರೆ

ನೀಚ, ಶತ್ರುಕ್ಷೇತ್ರೀ ಶತೃಮಧ್ಯ ಪಾಪಗ್ರಹಯುಕ್ತ ಕ್ಷೀಣ, ಬಾಲ್ಯಾವಸ್ಥೆ, ವೃದ್ಧಾಪ್ಯ ಹೀಗೆ ದುರ್ಬಲನಿದ್ದರೆ ಶೂನ್ಯ ಗುಣಗಳು. ಆದರೆ ಅದೇ ಚಂದ್ರನು ಕೇವಲ ರಾಶಿಬಲದವನಿದ್ದರೆ, ಸ್ಥಾನಬಲದವನಿಲ್ಲದಿದ್ದರೆ ೨ ಗುಣಗಳು ಲಭಿಸುತ್ತವೆ. ಇದರಂತೆ ಕೇವಲ ಸ್ಥಾನಬಲದವನಿದ್ದು, ರಾಶಿಬಲದವನಿಲ್ಲದಿದ್ದರೂ ಕೂಡ ೨ ಗುಣಗಳು ಲಭಿಸುತ್ತವೆ.

## ೩) ಶುಕ್ರನ ಮೇಲಿಂದ :

ಚಂದ್ರನ ತರುವಾಯ ಮಾತೃಸೌಖ್ಯದ ಪೋಷಕ ಪೂರಕಕಾರಕ ಗ್ರಹವೆಂದರೆ ಶುಕ್ರನು. ಏಕೆಂದರೆ ಶುಕ್ಲಪಕ್ಷದ ರಾತ್ರಿಯಲ್ಲಿಯೂ, ಕೃಷ್ಣಪಕ್ಷದ ಹಗಲಿನಲ್ಲಿಯೂ ಜನಿಸಿದ ಜಾತಕನಿಗೆ ಚಂದ್ರನು ಮಾತೃಕಾರಕನಿದ್ದರೆ, ಶುಕ್ಲಪಕ್ಷದ ಹಗಲಿನಲ್ಲಿಯೂ, ಕೃಷ್ಣಪಕ್ಷದ ರಾತ್ರಿಯಲ್ಲಿಯೂ ಜನ್ಮಿಸಿದ ಜಾತಕನಿಗೆ ಶುಕ್ರನು ಮಾತೃಕಾರಕನು. ಆದುದರಿಂದ ಮಾತೃಸೌಖ್ಯಕ್ಕೆ ಶುಕ್ರನ ಬಲಾಬಲವನ್ನು ಪರಿಶೀಲಿಸಬೇಕು. ಜಾತಕದಲ್ಲಿ ಶುಕ್ರನು ಬಲಾಢ್ಯನಾಗಿದ್ದರೆ ೩ ಗುಣಗಳು ಲಭಿಸುತ್ತವೆ. ಹಿಂದೆ ಹೇಳಿದಂತೆ ಬಲಾಢ್ಯನೆಂದರೆ ರಾಶಿ ಬಲದವ, ಸ್ಥಾನ ಬಲದವ, ಯೋಗಕಾರಕ, ಹೀಗಿದ್ದರೆ ೩ ಗುಣಗಳು ಲಭಿಸುವವು. ಆದರೆ ಅದೇ ಶುಕ್ರನು ದುರ್ಬಲ ನಿರ್ಬಲನಿದ್ದರೆ ಶೂನ್ಯಗುಣಗಳು ಲಭಿಸುತ್ತವೆ. ಆದರೆ ಶುಕ್ರನು ಕೇವಲ ರಾಶಿ ಬಲದವನಿದ್ದು ಸ್ಥಾನ ಬಲದನನಿಲ್ಲದಿದ್ದರೆ ೨ ಗುಣ ಲಭಿಸುತ್ತದೆ. ಇದರಂತೆ ಕೇವಲ ಸ್ಥಾನಬಲದವನಿದ್ದು ರಾಶಿಬಲದವನಿಲ್ಲದಿದ್ದರೂ ಕೂಡ ಒಂದೇ ಒಂದು ಗುಣ ಲಭಿಸುತ್ತದೆ. ಹೀಗೆ ಶುಕ್ರನು ಕೂಡ ಮಾತೃಕಾರಕನಿದ್ದರೂ ಕೂಡ ಚಂದ್ರ–ಶುಕ್ರರಲ್ಲಿ ಚಂದ್ರನೇ ಹೆಚ್ಚು ಮಾತೃ ಪೋಷಕ ಗ್ರಹ. ಆದುದರಿಂದ ಬಲಾಢ್ಯ ಚಂದ್ರನಿಗೆ ೪ ಗುಣಗಳಿದ್ದರೆ ಬಲಾಢ್ಯ ಶುಕ್ರನಿಗೆ ೩ ಗುಣಗಳನ್ನು ವಿಧಿಸಲಾಗಿದೆ.

## ೪) ಗುರುವಿನ ಮೇಲಿಂದ :

ಚಂದ್ರ, ಶುಕ್ರರ ತರುವಾಯ ಗುರುವೂ ಕೂಡ ಮಾತೃ ಪೋಷಕ ಗ್ರಹವು. ಆದುದರಿಂದ ಜಾತಕದಲ್ಲಿ ಗುರುವು ಬಲಾಢ್ಯನಾಗಿದ್ದರೆ, ಮಾತೃ

ಸೌಖ್ಯ ಸಿಗುತ್ತದೆ. ಆದ್ದರಿಂದ ೨ ಗುಣಗಳು ಲಭಿಸುತ್ತವೆ. ಹಿಂದೆ ಹೇಳಿದಂತೆ ಬಲಾಢ್ಯ ಗುರುವೆಂದರೆ ರಾಶಿಬಲದವನು, ಸ್ಥಾನಬಲದವನೂ ಯೋಗಕಾರಕನು. ಆದರೆ ಅದೇ ಗುರುವು ನಿರ್ಬಲ ದುರ್ಬಲನಿದ್ದರೆ ಶೂನ್ಯಗುಣ. ಗುರುವು ಕೇವಲ ರಾಶಿಬಲದವನಿದ್ದು, ಸ್ಥಾನಬಲದವನಿಲ್ಲದಿದ್ದರೆ ೧ ಗುಣ ಲಭಿಸುತ್ತದೆ. ಇದರಂತೆ ಕೇವಲ ಸ್ಥಾನಬಲದವನಿದ್ದು, ರಾಶಿಬಲದವನಿಲ್ಲದಿದ್ದರೂ ಕೂಡ ೧ ಗುಣ ಮಾತ್ರ ಲಭಿಸುತ್ತದೆ. ಹೀಗೆ ಗುರುವು ಮಾತ್ರ ಪೋಷಕ ಗ್ರಹವಿದ್ದರೂ ಕೂಡ ಮಾತೃಸೌಖ್ಯದ ವಿಷಯವಾಗಿ ಚಂದ್ರನಿಗೆ ೪ ಗುಣಗಳು, ಶುಕ್ರನಿಗೆ ೩ ಗುಣಗಳು, ಗುರುವಿಗೆ ೨ ಗುಣಗಳನ್ನು ಮಾತ್ರ ವಿಧಿಸಲಾಗಿದೆ. ಆದರೆ ಒಂದು ಸಂಗತಿ ಮಾತ್ರ ನಿಜ. ಬಲಾಢ್ಯ ಗುರುವಿನ ಶುಭದೃಷ್ಟಿ ಚತುರ್ಥಸ್ಥಾನದ ಮೇಲಾಗಲಿ, ಚತುರ್ಥೇಶನ ಮೇಲಾಗಲಿ ಇದ್ದರೆ ಮಾತೃಸೌಖ್ಯ ಸಿಗುತ್ತದೆ.

## ಇ) ಮಾತೃಸೌಖ್ಯದ ಪೋಷಕ ಹಾಗೂ ಮಾತೃಸೌಖ್ಯದ ಅಭಾವದ ಯೋಗಗಳು :

### ೧) ಮಾತೃಸೌಖ್ಯದ ಪೋಷಕ ಯೋಗಗಳು :

೧) ಚಂದ್ರ, ಶುಕ್ರ, ಗುರು ಯಾವುದೊಂದು ಗ್ರಹವು ಬಲಾಢ್ಯರಾಗಿ ಚತುರ್ಥದಲ್ಲಿದ್ದರೆ ಮಾತೃಸೌಖ್ಯ ಸಿಗುತ್ತದೆ.

೨) ಬಲಾಢ್ಯ ಗುರುವಿನ ದೃಷ್ಟಿ ಚತುರ್ಥಸ್ಥಾನದ ಮೇಲಾಗಲಿ, ಚತುರ್ಥೇಶನ ಮೇಲಾಗಲಿ ಇದ್ದರೆ ಮಾತೃಸೌಖ್ಯ ಸಿಗುತ್ತದೆ.

೩) ಬಲಾಢ್ಯ ಗುರು, ಶುಕ್ರ, ಚಂದ್ರರು ದಶಮದಲ್ಲಿದ್ದರೂ ಮಾತೃಸೌಖ್ಯ ಸಿಗುತ್ತದೆ.

೪) ಗುರು-ಚಂದ್ರ, ಗುರು-ಶುಕ್ರ, ಶುಕ್ರ-ಚಂದ್ರ ಈ ಮೂರು ಜೋಡಿ ಗ್ರಹಗಳ ಯುತಿಯೋಗವಾಗಲಿ, ಪ್ರತಿಯೋಗವಾಗಲಿ ಲಗ್ನ, ಚತುರ್ಥ, ದಶಮ, ಸಪ್ತಮ, ಪಂಚಮ ಈ ಯಾವುದೊಂದು ಸ್ಥಾನದ ಮೇಲಿದ್ದರೆ ಮಾತೃಸೌಖ್ಯ ಲಭಿಸುತ್ತವೆ;

ಹೀಗೆ ಮೇಲೆ ಬರೆದ ಶುಭಯೋಗಗಳಿದ್ದರೆ, ಮಾತೃಸೌಖ್ಯ ಲಭಿಸು ತ್ತದೆ ಹಾಗೂ ೨ ಗುಣಗಳು ದೊರೆಯುತ್ತವೆ.

**೨) ಮಾತೃಸೌಖ್ಯ ಅಭಾವದ ಯೋಗಗಳು :**

೧) ಚಂದ್ರನು ನಿರ್ಬಲ ದುರ್ಬಲನಾಗಿ ಷಷ್ಠ, ಅಷ್ಟಮ, ವ್ಯಯದ, ಸ್ಥಾನ ಗಳಲ್ಲಿದ್ದರೆ

೨) ಶನಿದೃಷ್ಟಿತ ಇಲ್ಲವೆ ರಾಹುದೃಷ್ಟಿತ ಚಂದ್ರನು ಯಾವುದೇ ಸ್ಥಾನ ದಲ್ಲಿದ್ದರೆ

೩) ಯಾವುದೇ ರಾಶಿಯ ಮಂಗಳ ಚತುರ್ಥದಲ್ಲಿದ್ದರೆ (ಚತುರ್ಥೇಶ ನಾಗಿರದೆ)

೪) ಶನಿ – ಮಂಗಳ, ಶನಿ – ಚಂದ್ರ, ಚಂದ್ರ – ರಾಹು, ಶನಿ – ರವಿ, ರವಿ – ಕೇತು ಈ ಜೋಡಿ ಗ್ರಹಗಳ ಯುತಿಯೋಗವಾಗಲಿ, ಪ್ರತಿ ಯೋಗವಾಗಲಿ ಲಗ್ನ, ಸಪ್ತಮ, ದಶಮ, ಚತುರ್ಥ, ಪಂಚಮ, ಈ ಯಾವುದೊಂದು ಸ್ಥಾನದಲ್ಲಿದ್ದರೆ

೫) ಧನ ಸ್ಥಾನದಲ್ಲಿ ಶನಿ ತೃತೀಯದಲ್ಲಿ, ರಾಹು, ಚತುರ್ಥದಲ್ಲಿ ಮಂಗಳ ನಿದ್ದರೆ

೬) ಆಶ್ಲೇಷಾ, ಮೂಲಾ, ಜ್ಯೇಷ್ಠಾ ಈ ಯಾವುದೊಂದು ನಕ್ಷತ್ರದಲ್ಲಿ ಜಾತಕನು ಜನಿಸಿದ್ದರೆ

೭) ಚತುರ್ಥೇಶನು ನೀಚ, ಶತ್ರುಕ್ಷೇತ್ರೀ, ವಕ್ರೀ, ವೃದ್ಧಾಪ್ಯ, ಅಸ್ತ, ದುರ್ಬಲನಿದ್ದರೆ

೮) ಮಂಗಳ, ರಾಹು, ಶನಿ ಈ ಮೂರೂ ಗ್ರಹಗಳಲ್ಲಿ ಯಾವುದಾದ ರೊಂದು ಗ್ರಹ ಅದರಲ್ಲಿಯೂ ಮಂಗಳ, ರಾಹುಗಳು ದಶಮದಲ್ಲಿ ದ್ದರೂ ಮಾತೃಸೌಖ್ಯದ ಅಭಾವ ಸೂಚಿಸುತ್ತದೆ.

ಹೀಗೆ ಮೇಲೆ ಬರೆದ ಎಂಟು ಅಶುಭ ಯೋಗಗಳಿದ್ದ ಜಾತಕನಿಗೆ ಮಾತೃಸೌಖ್ಯದ ಅಭಾವವಿರುತ್ತದೆ. ಆದುದರಿಂದ ಶೂನ್ಯಗುಣ ಬರುತ್ತದೆ.



# ೩

# ಪತಿಸೌಖ್ಯ ಹಾಗೂ ಪತ್ನೀಸೌಖ್ಯ

## ಗುಣಗಳು ೧೫

ಯಾವುದೊಂದು ಮಗುವಿನ ಜಾತಕ ಪರಿಶೀಲನೆಗೆ ತೆಗೆದುಕೊಂಡ ಕೂಡಲೇ ಆ ಜಾತಕನ ಆರೋಗ್ಯ ಹಾಗೂ ಆಯುರ್ದಾಯದ ಬಗೆಗೆ ಪ್ರಪ್ರಥಮವಾಗಿ ಪರಿಶೀಲಿಸಲಾಗುತ್ತದೆ. ಆ ಬಳಿಕ ಆ ಮಗುವಿಗೆ ಮಾತೃ ಸೌಖ್ಯ ಹೇಗಿದೆ ಎಂಬುದನ್ನು ಪರಿಶೀಲಿಸುತ್ತಾರೆ. ಮಗು ಪ್ರಬುದ್ಧವಾಗಿ ಗೃಹಸ್ಥಾಶ್ರಮದ ಹಂತಕ್ಕೆ ಬಂದ ಕೂಡಲೇ. ಆ ವ್ಯಕ್ತಿಯ ಆ ಜಾತಕನ ಪತಿ, ಪತ್ನೀಸೌಖ್ಯ ಹೇಗಿದೆ ಎಂಬುದನ್ನು ಪರಿಶೀಲಿಸಲಾಗುತ್ತದೆ. ಏಕೆಂದರೆ ಯಾವುದೇ ಜಾತಕನ ಜೀವನದಲ್ಲಿ ಮಾತೃಸೌಖ್ಯದಷ್ಟೇ ಮಹತ್ವದ ಸ್ಥಾನ ಪತಿ, ಪತ್ನೀಸೌಖ್ಯಕ್ಕೆ ಕೊಡಬೇಕಾಗುತ್ತದೆ.

ಬಾಲ್ಯದಲ್ಲಿ ತಾಯಿಯ ಸೌಖ್ಯ ಎಷ್ಟು ಮಹತ್ವದ್ದಿದೆಯೋ ಹಾಗೆ ಯೌವನದಲ್ಲಿ ಹಾಗೂ ವೃದ್ಧಾಪ್ಯದಲ್ಲಿ ಪತಿ, ಪತ್ನಿಸೌಖ್ಯ ಅಷ್ಟೇ ಮಹತ್ವದ್ದಿದೆ. ಅಂತೆಯೇ ಆಡು ಭಾಷೆಯಲ್ಲಿ ನಿನ್ನ ಹೆಂಡತಿ ಹೇಗಿದ್ದಾಳೆ? ಎಲ್ಲವೂ ಸೌಖ್ಯವೇ ಎಂದು ವಿಚಾರಿಸುವ ಬದಲು ನಿನ್ನ ಕುಟುಂಬ ಚನ್ನಾಗಿದ್ದಾಳೆಯೋ ಎಂದು ವಿಚಾರಿಸುವ ಪರಿಪಾಠವಿದೆ. ಕುಟುಂಬದ ಸಂಕೇತವೇ ಪತ್ನಿಯಾಗಿದೆ.

ಜಾತಕನು ಪ್ರಭಾವೀ ರಾಜಕಾರಣಿ ಇರಬಹುದು; ದಕ್ಷ ಅಧಿಕಾರಿ ಇರಬಹುದು; ಪ್ರತಿಭಾವಂತ ಬುದ್ಧಿಜೀವಿ ಇರಬಹುದು; ಯಶಸ್ವಿ ವಿದ್ವಾಂಸ

ಇರಬಹುದು; ಚಾಣಾಕ್ಷ ವ್ಯಾಪಾರಿ ಇರಬಹುದು; ಹೇರಳ ಹಣ ಸಂಪಾದಿಸಿದ ಕೋಟ್ಯಾಧೀಶನಿರಬಹುದು; ಅಗಣಿತ ಪಾಂಡಿತ್ಯವಿರುವ ಪಂಡಿತನಿರಬಹುದು; ಮೇಧಾವಿ ಇರಬಹುದು. ಆದರೆ ಅವನಿಗೆ ಅನುರೂಪಳಾದ ಪತ್ನಿ ಇರದಿದ್ದರೆ ಅವನ ಬಾಳು ನಿಃಪ್ರಾಯವಾಗುತ್ತದೆ.

ಗೃಹಸ್ಥಾಶ್ರಮ ಜೀವನದಲ್ಲಿ ಪತ್ನೀಸೌಖ್ಯ ಬಹಳ ಮಹತ್ವಪೂರ್ಣವಿದೆ. ಆಜೀವ ಕೇವಲ ಹೆಂಡತಿಯೆಂದು ಸಂಬೋಧಿತವಾಗಿದ್ದರೂ, ಅವರ ಪಾತ್ರ ಬಹಳ ಮಹತ್ವದ್ದಿದೆ ಅದನ್ನೇ ಸುಭಾಷಿತಕಾರರು ಹೀಗೆ ಹೇಳಿದ್ದಾರೆ :

> ಕಾರ್ಯೇಷುದಾಸೀ ಕರಣೇಷುಮಂತ್ರಿ
> ರೂಪೇಚಲಕ್ಷ್ಮೀ ಕ್ಷಮಯಾಧರಿತ್ರಿ
> ಸ್ನೇಹೇಚವಣಾತಾ ಶಯನೇಷುರಂಭಾ
> ಷಡ್ಗುಣ್ಯಯುಕ್ತಾ ಖಲುಧರ್ಮಪತ್ನಿ

ಎಂದು ಹೇಳಿದ್ದಾರೆ.

ಆದ್ದರಿಂದ ಎಲ್ಲರೂ ಇಂಥ ಧರ್ಮಪತ್ನಿಯನ್ನು ಬಯಸುವುದು ಸ್ವಾಭಾವಿಕ. ಆದರೆ ಕೇವಲ ಬಯಸುವುದರಿಂದ ಇಂಥ ಪತ್ನಿ ದೊರೆಯಲಾರಳು. ಇದರಂತೆ ಉತ್ತಮ ಪತಿಯೂ ಕೂಡ ದೊರೆಯುವುದು ಕೂಡ ದೈವದ ಕೈಯಲ್ಲಿದೆ.

ಪತಿ – ಪತ್ನಿ ಸೌಖ್ಯವೇ ಕೌಟುಂಬಿಕ ಸೌಹಾರ್ದತೆಗೆ ಕಾರಣವು. ಅಂತೆಯೇ ಕುಂಡಲಿ ಗುಣ ನಿರ್ಣಯದಲ್ಲಿ ಪತಿ–ಪತ್ನಿ ಸೌಖ್ಯಕ್ಕೆ ಬಹಳ ಮಹತ್ವ ಕೊಡಲಾಗಿದ್ದು, ಮಾತೃಸೌಖ್ಯಕ್ಕೆ ಕೊಟ್ಟಷ್ಟೇ ಇದಕ್ಕೂ ೧೮ ಗುಣಗಳನ್ನು ನಿರ್ಧರಿಸಲಾಗಿದೆ. ಪತಿ–ಪತ್ನಿ ಸೌಖ್ಯವುಳ್ಳ ಜಾತಕ ಹೇಗಿರುತ್ತದೆ, ಪತಿ–ಪತ್ನಿ ಸೌಖ್ಯದ ಅಭಾವವಿರುವ ಜಾತಕ ಹೇಗಿರುತ್ತದೆ. ಅವರ ಜಾತಕದಲ್ಲಿಯ ಗ್ರಹಗಳ ಗ್ರಹಸ್ಥಿತಿ ಹೇಗೆ ಇರುತ್ತದೆ ಎಂಬುದರ ವಿಶ್ಲೇಷಣೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಯಾವುದೇ ಜಾತಕನ-ಜಾತಕಳ ಪತಿ-ಪತ್ನಿ ಸೌಖ್ಯದ ವಿಷಯವಾಗಿ ಅರ್ಥಾತ್ ಯಾರೊಬ್ಬರ ವೈವಾಹಿಕ ಜೀವನವು ಸುಖರೂಪವೂ, ಸುಮಧುರವೂ, ಸುರಳೀತವೂ ಇರುವುದು ಹೇಗೆ ಎಂಬುದನ್ನು ತಿಳಿಯಲು ಇಲ್ಲವೇ ಯಾರೊಬ್ಬರ ದಾಂಪತ್ಯ ಜೀವನಕ್ಕೆ ತೊಂದರೆ ಇರುವುದೋ ಹೇಗೆ ಎಂಬುದನ್ನು ತಿಳಿಯಲು ನಾವು ನಾಲ್ಕು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ, ೧। ಸಪ್ತಮ ಸ್ಥಾನ ಹಾಗೂ ಸಪ್ತಮೇಶನ ಬಲಾಬಲ, ೨) ಶುಕ್ರನ ಬಲಾಬಲ, ೩) ಗುರುವಿನ ಬಲಾಬಲ, ೪) ಪತಿ-ಪತ್ನೀ ಸೌಖ್ಯದ ಶುಭ ಯೋಗಗಳು ಹಾಗೂ ಅಶುಭಯೋಗಗಳು. ಈ ನಾಲ್ಕು ಸಂಗತಿಗಳು ಪೂರಕವಿದ್ದರೆ ೧೫ ಗುಣಗಳಿಗ ೧೫ ಗುಣಗಳು. ಈ ನಾಲ್ಕೂ ಸಂಗತಿಗಳು ಪ್ರತಿಕೂಲವಿದ್ದರೆ ಶೂನ್ಯಗುಣ ಬರುತ್ತದೆ. ಇದರಲ್ಲಿ ೧-೨ ಸಂಗತಿಗಳು ಪೂರಕವಿದ್ದರೆ ಕಡಿಮೆ ಗುಣಗಳು ಬರುತ್ತವೆ. ಅವುಗಳ ವಿವರಣೆಯು ಹೀಗಿದೆ :

## ೧) ಸಪ್ತಮ ಸ್ಥಾನದ ಮೇಲಿಂದ :

ಹೇಗೆ ಜಾತಕದ ಚತುರ್ಥ ಸ್ಥಾನವು ಮಾತೃಕಾರಕ ಸ್ಥಾನವೋ ಹಾಗೆ ಜಾತಕದ ಸಪ್ತಮ ಸ್ಥಾನವು ಪತಿ – ಪತ್ನಿಯರ ಸೌಖ್ಯದ ಸ್ಥಾನವು. ಇಷ್ಟೇ ಅಲ್ಲ ವಿವಾಹ, ವೈವಾಹಿಕ ಜೀವನ, ಕೌಟುಂಬಿಕ ಸೌಖ್ಯ ಮೊದಲಾದ ವಿವಾಹಕ್ಕೆ ಸಂಬಂಧಿಸಿದ ಎಲ್ಲ ಸಂಗತಿಗಳಿಗೂ ಸಪ್ತಮ ಸ್ಥಾನವೇ ಕಾರಕ ಸ್ಥಾನವು ಆದುದರಿಂದ ಸಪ್ತಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ ಗ್ರಹಗಳಿದ್ದರೆ ಇವರಿಗೆ ಪತಿ, ಪತ್ನಿಯರ ಸೌಖ್ಯ ಚೆನ್ನಾಗಿರುತ್ತದೆ. ಅರ್ಥಾತ್ ವೈವಾಹಿಕ ಜೀವನ ಸುಖಕರವಿರುತ್ತದೆ. ಅದರಲ್ಲಿಯೂ ಶುಭ ಗ್ರಹಗಳಾದ ಶುಕ್ರ, ಗುರು, ಚಂದ್ರ ಈ ಮೂರು ಗ್ರಹಗಳಲ್ಲಿ ಯಾವುದೊಂದು ಗ್ರಹವು ಇಲ್ಲವೇ ಯಾವುದೇ ಎರಡು ಗ್ರಹಗಳು ಅಥವಾ ಮೂರೂ ಗ್ರಹಗಳು ಬಲಾಢ್ಯರಾಗಿ ಅಂದರೆ ರಾಶಿ ಬಲದವರಾಗಿ ಸಪ್ತಮದಲ್ಲಿದ್ದರೆ, ಪತಿ-ಪತ್ನಿಯರ ಸೌಖ್ಯ ಚೆನ್ನಾಗಿರುತ್ತದೆ. ಆದ್ದರಿಂದ ೨ ಗುಣಗಳು ಲಭಿಸುತ್ತವೆ. ಇವರಂತೆ ರವಿ-ಬುಧರು ಬಲಾಢ್ಯರಾಗಿ ಸಪ್ತಮದಲ್ಲಿದ್ದರೂ ಕೂಡ ಪತಿ-ಪತ್ನಿಯರ ಸೌಖ್ಯ ಲಭಿಸುತ್ತದೆ. ಆದರೆ ಗುಣ ಮಾತ್ರ ೧ ಲಭಿಸುತ್ತದೆ.

ಆದರೆ ಪಾಪ ಗ್ರಹಗಳಾದ ಮಂಗಳ, ರಾಹು, ಶನಿ, ಕೇತು ಈ ನಾಲ್ಕು ಗ್ರಹಗಳಲ್ಲಿ ಆದರಲ್ಲಿಯೂ ಮಂಗಳ, ರಾಹು ಗ್ರಹಗಳು ಸಪ್ತಮದಲ್ಲಿದ್ದರೆ, ಪತಿ-ಪತ್ನಿಯರ ಸೌಖ್ಯ ಸಿಗಲಾರದು. ಆದ್ದರಿಂದ ಶೂನ್ಯ ಗುಣಗಳು ದೊರೆಯುತ್ತವೆ. ಆದರೆ ಒಂದು ಸಂಗತಿ ಇವೇ ಪಾಪಗ್ರಹಗಳು ಸಪ್ತಮೇಶರಾಗಿ ಸಪ್ತಮದಲ್ಲಿದ್ದರೆ, ಸ್ಥಾನಬಲದಿಂದಾಗಿ ಮಾತ್ರ ಪತಿ - ಪತ್ನಿಯರ ಸೌಖ್ಯ ಲಭಿಸುತ್ತದೆ. ಈ ಕಾರಣದಿಂದಾಗಿ ೨ ಗುಣಗಳು ಲಭಿಸುತ್ತವೆ.

ಯಾವುದೇ ಗ್ರಹವು ಸಪ್ತಮೇಶರಾಗಿ ಬಲಾಢ್ಯರಿದ್ದರೆ ಅಂದರೆ ರಾಶಿ ಬಲದವರು ಸ್ಥಾನ ಬಲದವರೂ ಇದ್ದರೆ ವೈವಾಹಿಕ ಜೀವನದ ಸೌಖ್ಯ ಸಿಗುತ್ತದೆ. ಆದ್ದರಿಂದ ೪ ಗುಣಗಳು ಲಭಿಸುತ್ತವೆ. ಆದರೆ ಸಪ್ತಮದಲ್ಲಿ ದುರ್ಬಲ ಗ್ರಹವಿದ್ದು ಸಪ್ತಮೇಶನು ಬಲಾಢ್ಯನಿದ್ದರೆ ೪ ಗುಣ ಲಭಿಸುತ್ತದೆ. ಇದರಂತೆ ಸಪ್ತಮದಲ್ಲಿ ಬಲಾಢ್ಯ ಗ್ರಹವಿದ್ದು ಸಪ್ತಮೇಶನು ದುರ್ಬಲನಿದ್ದರೆ ೨ ಗುಣಗಳು ಲಭಿಸುತ್ತವೆ. ಸಪ್ತಮ ಸ್ಥಾನದಲ್ಲಿ ಬಲಾಢ್ಯ ಗ್ರಹವು ಸಪ್ತಮೇಶನು ಬಲಾಢ್ಯನಿದ್ದರೆ ೬ ಗುಣಗಳು ಲಭಿಸುತ್ತವೆ. ಶುಭ ಗ್ರಹಗಳು ಸಪ್ತಮದಲ್ಲಿದ್ದು (ಬಲಾಢ್ಯರಾಗಿ) ಸಪ್ತಮೇಶನು ಬಲಾಢ್ಯರಿದ್ದರೆ ಮಾತ್ರ ೬ ಗುಣಗಳು ಲಭಿಸುತ್ತವೆ. ಆದರೆ ಬಲಾಢ್ಯ ರವಿ, ಬುಧರು ಸಪ್ತಮದಲ್ಲಿದ್ದು ಸಪ್ತಮೇಶನು ಬಲಾಢ್ಯನಿದ್ದರೆ ೫ ಗುಣಗಳು ಲಭಿಸುತ್ತವೆ. ಇನ್ನು ಸಪ್ತಮ ಸ್ಥಾನದಲ್ಲಿ ದುರ್ಬಲ ಗ್ರಹವಿದ್ದು ಸಪ್ತಮೇಶನೂ ದುರ್ಬಲನಿದ್ದರೆ ಶೂನ್ಯಗುಣ ಲಭಿಸುತ್ತವೆ.

### ೨) ಶುಕ್ರನ ಮೇಲಿಂದ :

ಹೇಗೆ ಮಾತೃ ಸೌಖ್ಯಕ್ಕೆ ಚಂದ್ರನು ಪೋಷಕ ಕಾರಕ ಗ್ರಹವೋ ಹಾಗೆ ಪತಿ – ಪತ್ನಿಯರ ಸೌಖ್ಯಕ್ಕೆ ಅರ್ಥಾತ್ ಸುಖಕರ ವೈವಾಹಿಕ ಜೀವನಕ್ಕೆ ಶುಕ್ರನು ಪೋಷಕನೂ ಪೂರಕನೂ ಕಾರಕವೂ ಗ್ರಹವು. ಏಕೆಂದರೆ ಸುಖ, ಸೌಂದರ್ಯ, ವಿಲಾಸ, ಉಪಭೋಗ, ವಿಷಯವಾಸನೆ, ಪ್ರೇಮ, ಪ್ರಣಯ, ವಿವಾಹ, ಮಮತೆ, ಈ ಎಲ್ಲ ಗುಣಗಳಿಗೆ ಶುಕ್ರನೇ ಕಾರಕ ಗ್ರಹವು. ಇದಲ್ಲದೆ ಸ್ತ್ರೀ ಪುರುಷರ ವೀರ್ಯ ಧಾತುವಿನ ಮೇಲೆಯೂ ಸಹ ಶುಕ್ರನದೇ ಆಧಿಪತ್ಯ

ವಿರುತ್ತದೆ. ಇದೂ ಅಲ್ಲದೇ ವಯಸ್ಸಿನ ೧೭ ರಿಂದ ೪೧ ವರ್ಷದ ವರೆಗೂ ಶುಕ್ರನ ಗುಣ ಧರ್ಮದ ಪರಿಣಾಮವೇ ಹೆಚ್ಚು. ಆದುದರಿಂದ ಯಾರ ಜಾತಕದಲ್ಲಿ ಶುಕ್ರನು ಬಲಾಢ್ಯನಿರುತ್ತಾನೆಯೋ ಅವರ ವೈವಾಹಿಕ ಜೀವನ ಸುಖಕರವಿರುತ್ತದೆ. ಬಲಾಢ್ಯನೆಂದರೆ ರಾಶಿ ಬಲದವನೂ, ಸ್ಥಾನಬಲದ ವನೂ ಇರಬೇಕು. ಅಂದರೆ ಮಾತ್ರ ೪ ಗುಣಗಳು ಲಭಿಸುತ್ತವೆ. ಆದರೆ ಶುಕ್ರನು ಕೇವಲ ರಾಶಿಬಲದವನಿದ್ದು, ಸ್ಥಾನಬಲದವನಿಲ್ಲದಿದ್ದರೆ ೨ ಗುಣ ಗಳು. ಇದರಂತೆ ಸ್ಥಾನಬಲದವನಿದ್ದು, ರಾಶಿಬಲದವನಿಲ್ಲದಿದ್ದರೂ ೨ಗುಣ ಗಳು ಲಭಿಸುತ್ತವೆ.

## ೩) ಗುರುವಿನ ನೋಟದಿಂದ :

ಶುಕ್ರನ ತರುವಾಯ ಪತಿ–ಪತ್ನಿಯರ ಸೌಖ್ಯ ಅರ್ಥಾತ್ ದಾಂಪತ್ಯ ಜೀವನ ಸುಖರೂಪಕಾರಕ ಪೋಷಕ ಗ್ರಹವೆಂದರೆ ಗುರುವು. ಏಕೆಂದರೆ ವಿವಾಹದ ಉದ್ದೇಶ ಸಂತಾನೋತ್ಪತ್ತಿ, ಪ್ರಜೋತ್ಪತ್ತಿ, ಇರುತ್ತದೆ. ಗುರುವು ಸಂತಾನಕಾರಕನು. ಆದುದರಿಂದ ಸುಖಕರ ಸುಮಧುರ ವೈವಾ ಹಿಕ ಜೀವನಕ್ಕೆ ಗುರುವಿನ ಬಲಾಬಲವನ್ನು ಪರಿಶೀಲಿಸಲೇಬೇಕು. ಅಷ್ಟೇ ಏಕೆ ಬಲಾಢ್ಯ ಗುರುವಿನ ಶುಭದೃಷ್ಟಿಯು ಸಪ್ತಮ ಸ್ಥಾನದ ಮೇಲಾಗಲಿ, ಸಪ್ತಮೇಶನಾಗಲಿ ಇದ್ದರೂ ಕೂಡ ಅವರ ವೈವಾಹಿಕ ಜೀವನ ಸುಖಕರ ವಿರುತ್ತದೆ. ಅಂದಬಳಿಕ ಗುರುವಿನ ಪ್ರಭಾವ ಪರಿಣಾಮ ಎಷ್ಟು ಮಹತ್ವ ವಿರುತ್ತದೆ ಎಂಬುದರ ಅರ್ಥವಾಗುತ್ತದೆ. ಆದುದರಿಂದ ಜಾತಕದಲ್ಲಿ ಬಲಾಢ್ಯ ಗುರುವಿದ್ದರೆ ೩ ಗುಣಗಳು ಬರುತ್ತವೆ. ಬಲಾಢ್ಯನೆಂದರೆ ರಾಶಿ ಬಲದವನೂ, ಸ್ಥಾನಬಲದವನೂ ಯೋಗಕಾರಕನೂ ಇರಬೇಕು. ಗುರುವು ಕೇವಲ ರಾಶಿಬಲದವನಿದ್ದರೆ, ಸ್ಥಾನಬಲದವನಿಲ್ಲದಿದ್ದರೆ ೨ ಗುಣಗಳು. ಇದರಂತೆ ಕೇವಲ ಸ್ಥಾನಬಲದವನಿದ್ದು, ರಾಶಿಬಲದವನಿಲ್ಲದಿದ್ದರೆ ೧ ಗುಣ ಲಭಿಸುತ್ತದೆ. ಹೀಗೆ ಪತಿ–ಪತ್ನಿಯರ ಸೌಖ್ಯಕ್ಕೆ ಶುಕ್ರನೊಂದಿಗೆ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ಶುಕ್ರ, ಗುರುಗಳಲ್ಲಿ ವಿವಾಹ ಹಾಗೂ ಸುಖಕರ ವೈವಾಹಿಕ ಜೀವನಕ್ಕೆ ಶುಕ್ರನೇ ಹೆಚ್ಚು ಕಾರಕ. ಪತಿ–ಪತ್ನಿ

ಯರ ಸೌಖ್ಯಕ್ಕೆ ಪೋಷಕನೂ, ಕಾರಕನೂ. ಅಂತೆಯೇ ಬಲಾಢ್ಯ ಶುಕ್ರನಿಗೆ ೪ ಗುಣಗಳನ್ನು ಬಲಾಢ್ಯ ಗುರುವಿಗೆ ೩ ಗುಣಗಳೆಂದೂ ನಿರ್ಧರಿಸಲಾಗಿದೆ.

**೪) ಪತಿ-ಪತ್ನಿಯರ ಸೌಖ್ಯದ ಶುಭಾಶುಭ ಯೋಗಗಳು.**

**ಪತಿ-ಪತ್ನಿ ಸೌಖ್ಯದ ಶುಭ ಯೋಗಗಳು**

೧) ಸಪ್ತಮೇಶನೂ ಸಪ್ತಮದಲ್ಲಿದ್ದರೆ ದಾಂಪತ್ಯ ಜೀವನವು ಸುಖಕರವಿರುತ್ತದೆ.

೨) ಗುರು, ಶುಕ್ರ, ಚಂದ್ರರು ಸಪ್ತಮೇಶರಾಗಿ ಸಪ್ತಮದಲ್ಲಿದ್ದರೆ ವೈವಾಹಿಕ ಜೀವನವು ಸುಖರೂಪವೂ ಸುಮಧುರವೂ ಇರುತ್ತದೆ.

೩) ಗುರು, ಶುಕ್ರ, ಚಂದ್ರರು ಬಲಾಢ್ಯರಿದ್ದು, ಸಪ್ತಮ ಸ್ಥಾನದಲ್ಲಿ ಯಾರಿದ್ದರೂ ಸುಖಕರ ವೈವಾಹಿಕ ಜೀವನವಿರುತ್ತದೆ.

೪) ಗುರು-ಶುಕ್ರ, ಗುರು-ಚಂದ್ರ, ಶುಕ್ರ-ಚಂದ್ರ ಈ ಮೂರು ಗ್ರಹಗಳ ಯುತಿಯೋಗವಾಗಲಿ, ಪ್ರತಿಯೋಗವಾಗಲಿ, ದೃಷ್ಟಿಯೋಗವಾಗಲಿ ಲಗ್ನ, ಪಂಚಮ, ಸಪ್ತಮ, ಭಾಗ್ಯ, ಲಾಭ, ಚತುರ್ಥ, ಈ ಯಾವುದೊಂದು ಸ್ಥಾನದಲ್ಲಿದ್ದರೆ ವೈವಾಹಿಕ ಜೀವನ ಸುಖಕರವಿರುತ್ತದೆ.

೫) ಸಪ್ತಮೇಶ, ಚತುರ್ಥೇಶ, ಪಂಚಮೇಶ ಈ ಮೂರು ಸ್ಥಾನಾಧೀಶರು ಬಲಾಢ್ಯರಿದ್ದರೆ ದಾಂಪತ್ಯ ಸುಖ ಚನ್ನಾಗಿರುತ್ತದೆ.

ಹೀಗೆ ಮೇಲೆ ಬರೆದ ಐದು ಯೋಗಗಳಲ್ಲಿ ಜನಿಸಿದ ಜಾತಕನ ವೈವಾಹಿಕ ಜೀವನ ಸುಖಕರವಿರುವುದರಿಂದ ೨ ಗುಣಗಳು ಲಭ್ಯವಿರುತ್ತವೆ

**೨) ಪತಿ-ಪತ್ನಿ ಸೌಖ್ಯದ ಅಶುಭ ಯೋಗಗಳು :**

೧) ಶುಕ್ರ, ಚಂದ್ರ, ಗುರು ಹಾಗೂ ಸಪ್ತಮೇಶ ದುರ್ಬಲರಿದ್ದರೆ ವೈವಾಹಿಕ ಜೀವನಕ್ಕೆ ತೊಂದರೆ.

೨) ಶನಿ. ಮಂಗಳ, ರಾಹು ಈ ಮೂರು ಗ್ರಹಗಳಲ್ಲಿ ಯಾರಿಬ್ಬರು ಸಪ್ತಮದಲ್ಲಿದ್ದರೆ ವೈವಾಹಿಕ ಜೀವನ ಸುಖಕರವಿರುವದಿಲ್ಲ.

೩) ಶನಿ–ಮಂಗಳ, ಶನಿ-ರವಿ, ಶನಿ–ಚಂದ್ರ, ಮಂಗಳ-ರಾಹು, ಚಂದ್ರ–ರಾಹು, ರವಿ-ಕೇತು ಈ ಗ್ರಹಗಳ ಯುತಿಯೋಗ ಪ್ರತಿಯೋಗವು ಲಗ್ನ, ಸಪ್ತಮ, ಚತುರ್ಥ, ದಶಮ. ಪಂಚಮ ಈ ಯಾವುದೊಂದು ಸ್ಥಾನದಲ್ಲಿದ್ದರೆ ವೈವಾಹಿಕ ಜೀವನ ಸುಖಕರವಿರುವುದಿಲ್ಲ.

೪) ಸಪ್ತಮೇಶ, ಪಂಚಮೇಶ, ಚತುರ್ಥೇಶ ಈ ಮೂರು ಸ್ಥಾನಾಧೀಶರು ದುರ್ಬಲರೂ, ನಿರ್ಬಲರೂ ಇದ್ದರೆ ದಾಂಪತ್ಯ ಜೀವನ ಸುಖಕರ ವಿರುವುದಿಲ್ಲ.

೫) ದ್ವಿತೀಯದಲ್ಲಿ ಶನಿ. ಚತುರ್ಥದಲ್ಲಿ ಮಂಗಳ, ಸಪ್ತಮದಲ್ಲಿ ರಾಹು ಹೀಗೆ ಯೋಗವಿದ್ದರೂ ವೈವಾಹಿಕ ಜೀವನ ಸುಖಕರವಿರುವದಿಲ್ಲ.

ಹೀಗೆ ಮೇಲೆ ಬರೆದ ಐದು ಅಶುಭ ಯೋಗಗಳಲ್ಲಿ ಜನಿಸಿದ ಜಾತಕನ ವೈವಾಹಿಕ ಜೀವನ ಶುಭಕರವಿರುವುದಿಲ್ಲವಾದ್ದರಿಂದ ಶೂನ್ಯ ಗುಣಗಳು ಬರುತ್ತವೆ.

ಪತಿ, ಪತ್ನಿಯರ ಸೌಖ್ಯ ಅರ್ಥಾತ್ ವೈವಾಹಿಕ ಜೀವನದ ವಿಷಯ ವಾಗಿ ನಾವು ಬರೆದು ಪ್ರಕಟಿಸಿದ **"ವಧೂವರರ ಜ್ಯೋತಿಷ್ಯ"** ಹಾಗೂ **"ಸ್ತ್ರೀ ಜ್ಯೋತಿಷ್ಯ" ಗ್ರಂಥಗಳಲ್ಲಿ ವಿವರವಾಗಿ ವಿವರಿಸಲಾಗಿದೆ.** ಪ್ರಸ್ತುತಃ ಈ ವಿಷಯಕ್ಕೆ ಬೇಕಾದ ವಿಷಯದ ಉಲ್ಲೇಖ ಇಲ್ಲಿ ಮಾಡಲಾಗಿದೆ.



# ೪

# ಆರ್ಥಿಕ ಸ್ಥಿತಿ

## ಗುಣಗಳು ೧೦

ಮಾನವನ ಜೀವನದಲ್ಲಿ ಅತ್ಯಂತ ಮಹತ್ವದ ವಿಷಯವಾದ ದ್ರವ್ಯಕ್ಕೂ ಜ್ಯೋತಿಷಿಗಳಿಗೂ ಇರುವ ಸಂಬಂಧ ಬಹಳ ಸ್ವಾಭಾವಿಕವಾದದ್ದು. ಏಕೆಂದರೆ ಸಲಹೆ ಪಡೆಯಲು ಬಂದವರಲ್ಲಿ ಬಹಳಷ್ಟು ಜನ ಆರ್ಥಿಕ ಪರಿಸ್ಥಿತಿಯ ವಿಷಯವಾಗಿಯೇ ಹೆಚ್ಚು ವಿಚಾರಿಸುತ್ತಾರೆ.

ಇಂದಿನ ದೈನಂದಿನ ಜೀವನದಲ್ಲಿ ಹಣವು ಎಷ್ಟೊಂದು ಮಹತ್ವದ ಪಾತ್ರ ವಹಿಸುತ್ತದೆ ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ಏಕೆಂದರೆ ವ್ಯಕ್ತಿ ಜೀವನದಲ್ಲಾಗಲಿ, ಕುಟುಂಬ ಜೀವನದಲ್ಲಾಗಲಿ, ಸಮಾಜ ಜೀವನದಲ್ಲಾಗಲಿ ಹಣದ ಮಹತ್ವವನ್ನು ಕುರಿತು ಬರೆದರೆ ಅದೊಂದು ಹೆಬ್ಬೊತ್ತಿಗೆ ಆಗುತ್ತದೆ. ಆ ಉದ್ದೇಶ ನಮಗಿಲ್ಲ, ಅಷ್ಟೇ ಅಲ್ಲ ಈ ಗ್ರಂಥದ ವ್ಯಾಪ್ತಿಗೂ ಬರುವುದಿಲ್ಲ. ಆದರೆ ಪ್ರಸ್ತುತಃ ಈ ಗ್ರಂಥದ, ಈ ಅಧ್ಯಾಯದ ಈ ವಿಷಯದ ಚೌಕಟ್ಟಿನಲ್ಲಿ ಯಾರೊಬ್ಬ ಜಾತಕನ ಆರ್ಥಿಕ ಸ್ಥಿತಿಯ ಬಗೆಗೆ ಗುಣಮಾಪನ ಹೇಗೆ ಮಾಡಬೇಕು ? ಉತ್ತಮ ಆರ್ಥಿಕ ಸ್ಥಿತಿಯಿರುವ ಜಾತಕ ಹೇಗಿರುತ್ತದೆ ? ಸದಾ ಆರ್ಥಿಕ ಅಡಚಣೆಯಿರುವ ಜಾತಕನ ಗ್ರಹಸ್ಥಿತಿ ಹೇಗೆ ಎಂಬುದನ್ನು ಪರಿಶೀಲಿಸುವಾ.

ಯಾರೊಬ್ಬರ ಹಣಕಾಸಿನ ವಿಷಯವಾಗಿ ತಿಳಿದುಕೊಳ್ಳಲು ಜಾತಕದಲ್ಲಿಯ ಅನೇಕ ಸ್ಥಾನಗಳನ್ನು, ಅನೇಕ ಗ್ರಹಗಳನ್ನು ಪರಿಶೀಲಿಸಬೇಕಾಗುತ್ತದೆ.

ನಿರ್ದಿಷ್ಟ ಗ್ರಹವೇ, ನಿರ್ದಿಷ್ಟ ಸ್ಥಾನವೇ ಕಾರಕವು ಪೋಷಕವು ಎಂದು ಹೇಳಲು ಬಾರದು. ಹೇಗೆಂದರೆ ಪಿತ್ರಾರ್ಜಿತ ಸೌಖ್ಯದ ಬಗೆಗೆ ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶನ ಬಲಾಬಲವನ್ನು ಸ್ಥಾವರ ಇಸ್ಟೇಟ, ಹೊಲ, ಮನೆ, ವಾಹನ, ಟಾಕೀಜ, ಗಿರಣಿ, ಕಾರಖಾನೆಗಳ ಮಾಲಕತ್ವ ಹಾಗೂ ತಾಯಿಯ ಕಡೆಯಿಂದ ಬರುವ ಹಣಕಾಸಿನ ವಿಷಯವಾಗಿ ಚತುರ್ಥ ಸ್ಥಾನವನ್ನು, ಸಹೋದರ-ಸಹೋದರಿಯರ ಹಣಕಾಸಿನ ಸಂಬಂಧವಾಗಿ ತೃತೀಯ ಸ್ಥಾನವನ್ನು, ಪೋಸ್ಟ, ಬ್ಯಾಂಕುಗಳಿಂದ ಬರುವ ಬಡ್ಡಿಯನ್ನು, ಠೇವಣಿ, ಶೇರು, ಡಿಬೆಂಚರ ಮೊದಲಾದವುಗಳಿಂದ ಬರುವ ಬಡ್ಡಿ, ಜಂಗಮ ಆಸ್ತಿಯಿಂದ ಬರುವ ಬಡ್ಡಿ, ಮಕ್ಕಳಿಂದ ಬರುವ ಹಣ ಇವುಗಳಿಗೆಲ್ಲ ಪಂಚಮಸ್ಥಾನ ಹಾಗೂ ಪಂಚಮಾಧೀಶರ ಬಲಾಬಲವನ್ನು.ಪತ್ನಿಯಿಂದ ಬರುವ ಹಣಕಾಸಿನ ವಿಷಯವಾಗಿ ಸಪ್ತಮ ಸ್ಥಾನ ಹಾಗೂ ಸಪ್ತಮಾಧೀಶರ ಬಲಾಬಲದಿಂದಲೂ ದತ್ತಕ, ಬಕ್ಷೀಸ, ಬಹುಮಾನ, ಲಾಟರಿ,ರೇಸು, ಭೂಗತ ಧನ, ಲಂಚ, ಕಾಣಿಕೆ ಮೊದಲಾದ ಆಕಸ್ಮಿಕ ಧನಲಾಭದ ವಿಷಯವಾಗಿ ಅಷ್ಟಮಸ್ಥಾನ ಹಾಗೂ ಅಷ್ಟಮಾಧೀಶರ ಬಲಾಬಲವನ್ನು, ಸ್ವತಂತ್ರ ವ್ಯಾಪಾರ, ಉದ್ಯೋಗ, ವೃತ್ತಿ,ಕೃಷಿ, ನೌಕರಿ ಮೊದಲಾದವುಗಳಿಂದ ಹಾಗೂ ತಂದೆಯಿಂದ ಬರುವ ಹಣದ ವಿಷಯವಾಗಿ ದಶಮಸ್ಥಾನವನ್ನು, ವಿದೇಶದಲ್ಲಿ ನೌಕರಿ ಮಾಡಿ ಇಲ್ಲವೇ ವಿದೇಶಗಳಿಗೆ ವಸ್ತುಗಳನ್ನು ರಫ್ತುಮಾಡಿ, ವಿದೇಶಗಳಿಗೆ ಸಂಬಂಧಿಸಿದ ಕೆಲಸಗಳಿಗಾಗಿ ದೊರೆಯುವ ಹಣ ಹಾಗೂ ಪ್ರಚಾರ ನಾಮ (goodwill) ಯಿಂದ ಬರುವ ಹಣ ಇವೇ ಮೊದಲಾದವುಗಳಿಗೆ ನವಮ ಸ್ಥಾನ ಹಾಗೂ ಭಾಗ್ಯೇಶನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಹೀಗೆ ಯಾರೊಬ್ಬರ ಹಣಕಾಸಿನ ವಿಷಯವಾಗಿ ತಿಳಿದುಕೊಳ್ಳಲು ಅನೇಕ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ.

ಇದರಂತೆ ಯಾರೊಬ್ಬರ ಆರ್ಥಿಕ ಸ್ಥಿತಿಯ ಬಗೆಗೆ, ಸಾಂಪತ್ತಿಕ ಸ್ಥಿತಿಯ ಬಗೆಗೆ ಅರಿತುಕೊಳ್ಳಲು ಜಾತಕದಲ್ಲಿಯ ಅನೇಕ ಗ್ರಹಗಳನ್ನು ಪರಿಶೀಲಿಸಬೇಕಾಗುತ್ತದೆ. ನಿರ್ದಿಷ್ಟ ಗ್ರಹವೇ ಆರ್ಥಿಕ ಸ್ಥಿತಿಯ ಕಾರಕವೂ ಪೋಷಕವೂ ಎಂದು ಹೇಳಲು ಬಾರದು. ಹೇಗೆಂದರೆ ತಂದೆಯಿಂದ ಬರುವ

ಹಣ, ಸರಕಾರದಿಂದ ಬರುವ ಹಣ, ಸರಕಾರಿ ನೌಕರಿಯಿಂದ ಬರುವ ಹಣ, ರಾಜಕೀಯ ವ್ಯಕ್ತಿಗಳಿಂದ, ಸರಕಾರಿ ಅಧಿಕಾರಿಗಳಿಂದ ಬರುವ ಹಣ. ಇವೇ ಮೊದಲಾದವುಗಳಿಗೆ ಸೂರ್ಯನ ಬಲಾಬಲವನ್ನು ತಾಯಿಯಿಂದ ಹಾಗೂ ತಾಯಿಯ ಬಳಗದಿಂದ ಹೊಲ,ಮನೆ,ಗದ್ದೆ, ಚಾಳ,ವಾಹನ, ಟಾಕೀಜ,ಗಿರಣಿ, ಕಾರಖಾನೆಗಳ ಮಾಲೀಕತ್ವ ಇವೇ ಮೊದಲಾದವುಗಳಿಂದ ಬರುವ ಹಣಕಾಸಿನ ವಿಷಯವಾಗಿ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕು. ಸಟ್ಟಾ, ಲಾಟರಿ, ಗುತ್ತಿಗೆ ವ್ಯವಹಾರ ಕಮೀಶನ್, ಹಂಚಿಕೆದಾರಿಕೆ ಮೊದಲಾದವು ಗಳ ಆಕಸ್ಮಿಕ ಧನಯೋಗದ ಬಗೆಗೆ ಕುಜನ ಬಲಾಬಲವನ್ನು, ಯಾವುದೇ ಪ್ರಕಾರದ ವ್ಯಾಪಾರ, ಠೇವಣಿ, ಬಡ್ಡಿ, ಲೇಖನಗಳಿಂದ ಬರುವ ಹಣಕಾಸಿನ ವಿಷಯವಾಗಿ ಬುಧನ ಬಲಾಬಲವನ್ನು, ವಿದ್ಯೆಯಿಂದಲೂ ಶಿಕ್ಷಣದಿಂದಲೂ, ಪಾಠ, ಪ್ರವಚನ, ಕೀರ್ತನೆಯಿಂದಲೂ, ಆಧ್ಯಾತ್ಮದಿಂದ, ಮಠಾಧೀಶ ರಿಂದಲೂ, ಲೇಖನದಿಂದಲೂ, ಮಕ್ಕಳಿಂದಲೂ ಇವೇ ಮೊದಲಾದವುಗಳಿಂದ ಬರುವ ಹಣದ ವಿಷಯವಾಗಿ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕಾ ಗುತ್ತದೆ. ಸ್ವಸ್ತ್ರೀ, ಪರಸ್ತ್ರೀಯರಿಂದ ಬರುವ ಹಣಕಾಸಿನ ವಿಷಯವಾಗಿ ಶುಕ್ರನ ಬಲಾಬಲವನ್ನು, ಕಾಯದೇ ಸಲಹೆಗಾರಿಕೆ, ಇಲ್ಲವೆ ಸ್ವತಹ ಬಹಳ ಪರಿಶ್ರಮದಿಂದಲೂ ಹಣ ಸಂಪಾದಿಸುವಿಕೆ ಇವುಗಳಿಗಾಗಿ ಶನಿಯ ಬಲಾಬಲ ವನ್ನು ಪರಿಶೀಲಿಸಬೇಕಾಗುತ್ತದೆ. ಹೀಗೆ ಯಾರೊಬ್ಬರ ಆರ್ಥಿಕ ವಿಷಯ ವಾಗಿ ತಿಳಿದುಕೊಳ್ಳಲು ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸ ಬೇಕಾಗುತ್ತದೆ.

ವಿಭಿನ್ನ ಸ್ಥಾನಗಳ ಮೇಲಿಂದಲೂ ವಿಭಿನ್ನ ಗ್ರಹಗಳ ಮೇಲಿಂದಲೂ ವಿವಿಧ ಪ್ರಕಾರದ ದ್ರವ್ಯಾನುಕೂಲತೆಯಾಗುತ್ತಿದ್ದರೂ ಯಾರೊಬ್ಬರ ಆರ್ಥಿಕ ವಿಷಯವಾಗಿ ಮೂರೇ ಮೂರು ಪ್ರಕಾರಗಳಿರುತ್ತವೆ. ೧) ಪಿತ್ರಾರ್ಜಿತ, ೨) ಸ್ವಅರ್ಜಿತ, ೩) ಆಕಸ್ಮಿಕ ದನಯೋಗ, ಈ ಮೂರು ಪ್ರಕಾರದ ದ್ರವ್ಯಾನುಕೂಲತೆಯಿಂದ ಯಾರೊಬ್ಬರ ಸಾಂಪತ್ತಿಕ ಸ್ಥಿತಿಯ ಬಗೆಗೆ ತಿಳಿಯ ಬಹುದು. ಈ ಮೂರು ಸಂಗತಿಗಳು ಪೂರಕವಾಗಿದ್ದರೆ ೧೦ ಗುಣಗಳಿಗೆ ೧೦ ಗುಣಗಳು ಲಭಿಸುತ್ತವೆ. ಈ ಮೂರು ಸಂಗತಿಗಳು ಪ್ರತಿಕೂಲವಿದ್ದರೆ

ಶೂನ್ಯ ಗುಣಗಳು. ೧-೨ ಸಂಗತಿಗಳು ಕಡಿಮೆ ಇದ್ದರೆ ಕಡಿಮೆ ಗುಣಗಳು ಬರುತ್ತವೆ. ಅವುಗಳ ವಿವರಣೆ ಹೀಗಿದೆ.

**೧) ಪಿತಾರ್ಜಿತ ಸೌಖ್ಯ:**

ಪಿತ್ರಾರ್ಜಿತ ಸೌಖ್ಯವು ಎಲ್ಲರಿಗೂ ಲಭಿಸುವುದಿಲ್ಲ. ಕೆಲ ಸುದೈವೀ ಜಾತಕದವರಿಗೆ ಮಾತ್ರ ಲಭಿಸುತ್ತದೆ. ಪಿತ್ರಾರ್ಜಿತ ಸೌಖ್ಯದ ಪೋಷಕ ಸ್ಥಾನಗಳೆಂದರೆ, ದ್ವಿತೀಯ, ಚತುರ್ಥ, ದಶಮ ಈ ಮೂರು ಸ್ಥಾನಗಳು. ಏಕೆಂದರೆ ದ್ವಿತೀಯ ಸ್ಥಾನವು ಪಿತ್ರಾರ್ಜಿತ ಸ್ಥಾನವೇ ಇರುತ್ತದೆ. ಆದರೆ ಚತುರ್ಥ ಸ್ಥಾನವಿದು ಹೊಲ, ಮನೆ, ಗದ್ದೆ, ವಾಹನಗಳ ಸ್ಥಾನವಲ್ಲದೇ, ಟಾಕೀಜ, ಗಿರಣಿ, ಕಾರಖಾನೆಗಳ ಮಾಲಕರ ಸ್ಥಾನವೂ ಹೌದು. ಅಲ್ಲದೇ ಸ್ಥಾವರ ಇಸ್ಟೇಟಿನ ಸ್ಥಾನವು ಇರುವುದಲ್ಲದೇ, ತಾಯಿಯ ಕಡೆಯಿಂದ ಬರುವ ಸ್ಥಾನವು ಇರುತ್ತದೆ. ಇದರಂತೆ ದಶಮ ಸ್ಥಾನವಿದು ತಂದೆಯಿಂದ ಹಾಗೂ ತಂದೆಯ ಬಳಗದಿಂದ ಬರುವ ಸಾಂಪತ್ತಿಕ ಸ್ಥಾನವೂ ಇರುತ್ತದೆ. ಆದುದರಿಂದ ಈ ಮೂರು ಸ್ಥಾನಗಳು, ಅಂದರೆ ಈ ಮೂರು ಸ್ಥಾನಗಳಲ್ಲಿ ರುವ ಬಲಾಢ್ಯ ಗ್ರಹಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿದ್ದರೆ, ಪಿತ್ರಾರ್ಜಿತ ಸೌಖ್ಯ ಲಭಿಸುತ್ತದೆ. ಆದುದರಿಂದ ೩ ಗುಣಗಳಿಗೆ ೩ ಗುಣ ಗಳು ದೊರೆಯುತ್ತವೆ. ಆದರೆ ಈ ಮೂರು ಸ್ಥಾನಗಳಲ್ಲಿಯ ಗ್ರಹಗಳು ನಿರ್ಬಲರು, ದುರ್ಬಲರು ಇದ್ದರೆ ಶೂನ್ಯಗುಣ ದೊರೆಯುತ್ತದೆ.

ದ್ವಿತೀಯ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದು, ದ್ವಿತಿಯೇಶನು ಬಲಾಢ್ಯ ನಿದ್ದರೆ ೧ ಗುಣ ದೊರೆಯುತ್ತದೆ. ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶ ದುರ್ಬಲನಿದ್ದರೆ ಶೂನ್ಯಗುಣ. ಆದರೆ ದ್ವಿತಿಯೇಶ ಮಾತ್ರ ಬಲಾಢ್ಯನಿದ್ದು ದ್ವಿತಿಯದಲ್ಲಿ ದುರ್ಬಲ ಗ್ರಹ ಇಲ್ಲವೇ ಗ್ರಹಗಳಿದ್ದರೆ ½ ಗುಣ ದೊರೆಯು ತ್ತದೆ. ಇದರಂತೆ ದ್ವಿತಿಯೇಶ ದುರ್ಬಲನಿದ್ದು ದ್ವಿತೀಯ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೂ ½ ಗುಣ ದೊರೆಯುತ್ತದೆ.

ಚತುರ್ಥೇಶನು ಬಲಾಢ್ಯನಿದ್ದು, ಚತುರ್ಥದಲ್ಲಿ ಬಲಾಢ್ಯ ಗ್ರಹವಿದ್ದರೆ ಪಿತ್ರಾರ್ಜಿತ ಸೌಖ್ಯ ಲಭಿಸುತ್ತದೆ ಹಾಗು ೧ ಗುಣ ಲಭ್ಯವಿರುತ್ತದೆ. ಆದರೆ

ಚತುರ್ಥದಲ್ಲಿ ದುರ್ಬಲ ಗ್ರಹವಿದ್ದು ಚತುರ್ಥೇಶನೂ ದುರ್ಬಲನಿದ್ದರೆ ಶೂನ್ಯಗುಣ ದೊರೆಯುತ್ತದೆ. ಆದರೆ ಚತುರ್ಥದಲ್ಲಿ ಬಲಾಢ್ಯ ಗ್ರಹವಿದ್ದು, ಚತುರ್ಥೇಶನು ದುರ್ಬಲನಿದ್ದರೆ $\frac{1}{2}$ ಗುಣ ದೊರೆಯುತ್ತದೆ. ಇದರಂತೆ ಚತುರ್ಥದಲ್ಲಿ ದುರ್ಬಲ ಗ್ರಹವಿದ್ದು, ಚತುರ್ಥೇಶನು ಬಲಾಢ್ಯನಿದ್ದರೂ $\frac{1}{2}$ ಗುಣ ದೊರೆಯುತ್ತದೆ.

ದಶಮದಲ್ಲಿ ಬಲಾಢ್ಯ ಗ್ರಹವಿದ್ದು, ದಶಮೇಶನೂ ಬಲಾಢ್ಯನಿದ್ದರೆ 0 ಗುಣ ದೊರೆಯುತ್ತದೆ. ಆದರೆ ದಶಮದಲ್ಲಿ ದುರ್ಬಲ ಗ್ರಹವಿದ್ದು, ದಶಮೇಶನೂ ದುರ್ಬಲನಿದ್ದರೆ ಶೂನ್ಯಗುಣ ದೊರೆಯುತ್ತದೆ. ಆದರೆ ದಶಮದಲ್ಲಿ ಬಲಾಢ್ಯ ಗ್ರಹವಿದ್ದು ದಶಮೇಶನು ದುರ್ಬಲನಿದ್ದರೆ $\frac{1}{2}$ ಗುಣ ದೊರೆಯುತ್ತದೆ. ಇದರಂತೆ ದಶಮದಲ್ಲಿ ದುರ್ಬಲ ಗ್ರಹವಿದ್ದು ದಶಮೇಶನು ಬಲಾಢ್ಯನಿದ್ದರೂ ಕೂಡ $\frac{1}{2}$ ಗುಣ ದೊರೆಯುತ್ತದೆ,

ಹೀಗೆ ದ್ವಿತೀಯ, ಚತುರ್ಥ, ದಶಮ ಈ ಮೂರೂ ಸ್ಥಾನಗಳು ಮತ್ತು ಈ ಮೂರೂ ಸ್ಥಾನಾಧೀಶರ ಬಲಾಬಲದ ಮೇಲೆ ಪಿತ್ರಾರ್ಜಿತ ಸೌಖ್ಯದ ಗುಣಮಾಪನ ಮಾಡಬೇಕು.

೨) ಸ್ವಆರ್ಜಿತ :

ಸ್ವಾರ್ಜಿತವೆಂದರೆ ಸ್ವತಃ ಯಾವುದೊಂದು ಉದ್ಯೋಗ, ವ್ಯಾಪಾರ, ಕೃಷಿ, ವೃತ್ತಿ, ನೌಕರಿ ಮಾಡಿ ಗಳಿಸುವಿಕೆ. ಆದರೆ ಕೆಲವರಿಗೆ ವಿದ್ಯಾರ್ಹತೆ, ದೈಹಿಕ ಸ್ವಾಸ್ಥ್ಯ ಮೊದಲಾದ ಎಲ್ಲ ಅನುಕೂಲತೆಗಳಿದ್ದರೂ, ಸ್ವತಃ ಗಳಿಸಲು ಆಗುವದಿಲ್ಲ. ಇನ್ನು ಕೆಲವರು ಸ್ವತಹ ಸಾಕಷ್ಟು ಗಳಿಸಲು ಸಮರ್ಥರಿರುತ್ತಾರೆ. ಹೀಗೇಕೆ ಎಂದರೆ, ಅವರವರ ಜಾತಕದ ಗ್ರಹಸ್ಥಿತಿಯೇ ಕಾರಣ; ಯಾರೊಬ್ಬ ಜಾತಕನು ಹಣ ಗಳಿಸುವ ಸಾಮರ್ಥ್ಯವನ್ನು ತಿಳಿಯಲು ಆಯಾ ಜಾತಕನ ಜಾತಕದಲ್ಲಿಯ ಯೋಗಕಾರಕ ಗ್ರಹಗಳ ಬಲಾಬಲದ ಮೇಲೆ ಅವನ ಅಥವಾ ಅವಳ ಹಣ ಗಳಿಸುವ ಸಾಮರ್ಥ್ಯದ ವಿಷಯವಾಗಿ

ತಿಳಿಯುತ್ತದೆ. ಈ ಯೋಗಕಾರಕ ಗ್ರಹಗಳು ವಿಭಿನ್ನ ಲಗ್ನಗಳಿಗೆ ವಿಭಿನ್ನ ವಿದ್ದು, ಅವುಗಳ ವಿವರಣೆಯನ್ನು ಈ ಕೆಳಗಿನಂತೆ ಬರೆಯಲಾಗಿದೆ.

## ೧) ಮೇಷ ಲಗ್ನ :

ಈ ಲಗ್ನಕ್ಕೆ ರವಿ, ಚಂದ್ರ, ಮಂಗಳ, ಗುರುಗಳು ಯೋಗಕಾರಕ ಗ್ರಹಗಳು. ಈ ನಾಲ್ಕೂ ಗ್ರಹಗಳು ಬಲಾಢ್ಯರಿದ್ದರೆ, ಅಂದರೆ ರಾಶಿ ಬಲದವರಾಗಿ, ಸ್ಥಾನಬಲದವರೂ ಇದ್ದರೆ, ಇಂಥ ಜಾತಕನ ಹಣ ಗಳಿಸುವ ಸಾಮರ್ಥ್ಯ ಚೆನ್ನಾಗಿರುತ್ತದೆ. ಆದ್ದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುವವು. ಆದರೆ ಈ ನಾಲ್ಕು ಗ್ರಹಗಳು ದುರ್ಬಲವಿದ್ದರೆ ಶೂನ್ಯಗುಣಗಳು ಲಭಿಸುವವು. ಯಾವುದಾದರೂ ಒಂದು ಗ್ರಹ ಇಲ್ಲವೆ ೨–೩ ಗ್ರಹಗಳು ದುರ್ಬಲವಿದ್ದರೆ, ಗ್ರಹಗಳಿಗೆ ಒಂದು ಗುಣದಂತೆ ಕಡಿಮೆ ಬರುತ್ತವೆ. ಉದಾಹರಣೆಗೆ ಈ ಲಗ್ನಕ್ಕೆ ಗುರು ಒಬ್ಬನೇ ಬಲಾಢ್ಯನಿದ್ದು, ಉಳಿದ ಗ್ರಹಗಳು ದುರ್ಬಲವಿದ್ದರೆ ೧ ಗುಣ ಮಾತ್ರ ದೊರೆಯುತ್ತದೆ. ೨ ಗ್ರಹಗಳು ಬಲಾಢ್ಯರಿದ್ದರೆ ೨ ಗುಣಗಳು, ಹೀಗೆ ಆದರಲ್ಲಿ ಯಾವುದೊಂದು ಗ್ರಹ ಕೇವಲ ರಾಶಿಬಲವಿದ್ದರೆ, ಕೇವಲ ಸ್ಥಾನಬಲವಿದ್ದರೆ $\frac{1}{2}$ ಗುಣ ಲಭಿಸುತ್ತವೆ. ಹೀಗೆ ಮೇಷ ಲಗ್ನಕ್ಕೆ ರವಿ, ಚಂದ್ರ, ಮಂಗಳ, ಗುರುಗಳ ಬಲಾಬಲದ ಮೇಲೆ ಆ ಜಾತಕನ, ಸ್ವಆರ್ಜಿತ ವಿಷಯವಾಗಿ ಹಣಗಳಿಸುವ ಸಾಮರ್ಥ್ಯದ ವಿಷಯವಾಗಿ ಗುಣಮಾಪನ ಮಾಡಬೇಕು.

## ೨) ವೃಷಭ ಲಗ್ನ :

ಈ ಲಗ್ನಕ್ಕೆ ಶನಿ, ಬುಧ, ರವಿಯರು ಕ್ರಮಶಃ ಸ್ವಆರ್ಜಿತ ವಿಷಯವಾಗಿ ಯೋಗಕಾರಕರು. ಈ ಮೂರು ಗ್ರಹಗಳು ರಾಶಿ ಬಲದವರಾಗಿಯೂ, ಸ್ಥಾನಬಲದವರಾಗಿಯೂ ಇದ್ದರೆ, ಇಂಥ ಜಾತಕನು ಹಣ ಗಳಿಸುವ ಸಾಮರ್ಥ್ಯ ಚೆನ್ನಾಗಿರುತ್ತದೆ. ಆದ್ದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುತ್ತವೆ. ಆದರೆ ಈ ಮೂರೂ ಗ್ರಹಗಳು ದುರ್ಬಲರಿದ್ದರೆ, ಇವರಿಗೆ ಹಣ ಗಳಿಸುವ ಸಾಮರ್ಥ್ಯವಿರುವದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುತ್ತವೆ. ಆದರೆ ವೃಷಭ ಲಗ್ನದ ಮಹತ್ವದ ಸಂಗತಿಯೆಂದರೆ, ಶನಿಗೆ

೨ ಗುಣಗಳು, ಬುಧನಿಗೆ ೧, ರವಿಗೆ ೧ ಗುಣಗಳನ್ನು ನಿರ್ಧರಿಸಲಾಗಿದೆ. ಇಲ್ಲಿ ಶನಿಯು ದುರ್ಬಲನಿದ್ದು, ರವಿ, ಬುಧರು ಬಲಾಢ್ಯರಿದ್ದರೆ ೨ ಗುಣಗಳು ಮಾತ್ರ ಲಭಿಸುತ್ತವೆ. ಇದರಂತೆ ಶನಿಯೊಬ್ಬನೇ ಬಲಾಢ್ಯನಿದ್ದು, ರವಿ, ಬುಧರು ದುರ್ಬಲವಿದ್ದರೂ ೨ ಗುಣಗಳು, ಶನಿಯು ಸಂಗಡ ರವಿ, ಬುಧರಲ್ಲಿ ಯಾರೊಬ್ಬರು ಬಲಾಢ್ಯರಿದ್ದರೂ ೩ ಗುಣಗಳು ಲಭಿಸುತ್ತವೆ. ಈ ಹಿಂದೆ ಹೇಳಿದಂತೆ ಬಲಾಢ್ಯನೆಂದರೆ, ರಾಶಿ ಬಲದವ, ಸ್ಥಾನಬಲದವ, ರಾಶಿ ಹಾಗೂ ಸ್ಥಾನ ಬಲದಲ್ಲಿ ಯಾವುದಾದರೊಂದು ಬಲವಿದ್ದರೆ ½ ಗುಣಗಳು ಲಭಿಸುತ್ತವೆ. ಶನಿಯು ಕೂಡ ಕೇವಲ ರಾಶಿ ಬಲ, ಕೇವಲ ಸ್ಥಾನಬಲವಿದ್ದರೆ ೧ ಗುಣ ಮಾತ್ರ ಲಭಿಸುತ್ತದೆ, ಹೀಗೆ ವೃಷಭ ಲಗ್ನದ ಯೋಗ ಕಾರಕ ಗ್ರಹಗಳ ಗುಣಮಾಪನ ಮಾಡಬೇಕು.

## ೩) ಮಿಥುನ ಲಗ್ನ :

ಈ ಲಗ್ನಕ್ಕೆ ಬುಧ, ಗುರು, ಶನಿ, ಶುಕ್ರರು ಕ್ರಮಶಃ ಸ್ವಾರ್ಜಿತ ವಿಷಯದ ಯೋಗಕಾರಕ ಗ್ರಹಗಳು ಈ ನಾಲ್ಕು ಗ್ರಹಗಳು ರಾಶಿ ಬಲದವ ರಾಗಿಯೂ ಇದ್ದರೆ ಇಂಥ ಜಾತಕನ ಹಣಗಳಿಸುವ ಸಾಮರ್ಥ್ಯ ಉತ್ತಮ ವಿರುತ್ತದೆ. ಆದುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುವವು. ಆದರೆ ಈ ನಾಲ್ಕು ಗ್ರಹಗಳು ದುರ್ಬಲವಿದ್ದರೆ, ಇವರಿಗೆ ಹಣಗಳಿಸುವ ಸಾಮರ್ಥ್ಯವಿರುವುದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುವವು. ಈ ನಾಲ್ಕೂ ಗ್ರಹಗಳಲ್ಲಿ ಯಾವುದೊಂದು ಗ್ರಹ ಅಥವಾ ಯಾವುದೇ ಗ್ರಹಗಳು ದುರ್ಬಲವಿದ್ದರೆ, ಪ್ರತಿಗ್ರಹಕ್ಕೂ ೧ ಗುಣದಂತೆ ಅಷ್ಟು ಗುಣಗಳು ಕಡಿಮೆ ಆಗುವವು. ಉದಾಹರಣೆಗೆ ಈ ನಾಲ್ಕೂ ಗ್ರಹಗಳಲ್ಲಿ ಬುಧನೊಬ್ಬನೇ ದುರ್ಬಲನಿದ್ದರೆ ೧ ಗುಣ ಕಡಿಮೆ ಆಗಿ, ೩ ಗುಣಗಳು ಲಭಿಸುವವು. ಬುಧ, ಶುಕ್ರ ಈ ಎರಡು ಗ್ರಹಗಳು ದುರ್ಬಲವಿದ್ದರೆ ೨ ಗುಣ ಕಡಿಮೆ ಆಗಿ ೨ ಗುಣಗಳು ಲಭಿಸುವವು. ಇನ್ನು ಯಾವುದೊಂದು ಗ್ರಹ ಕೇವಲ ರಾಶಿ ಬಲವಿದ್ದು, ಸ್ಥಾನಬಲವಿಲ್ಲದಿದ್ದರೆ ½ ಗುಣಗಳು ಲಭ್ಯವಿರುತ್ತವೆ. ಹೀಗೆ ಮಿಥುನ ಲಗ್ನದ ಬುಧ, ಗುರು, ಶನಿ, ಶುಕ್ರ ಈ ನಾಲ್ಕು ಗ್ರಹಗಳ ಬಲಾಬಲವನ್ನು ವಿಮರ್ಶಿಸಿ, ವಿಂಗಡಿಸಿ ಗುಣಮಾಪನ ಮಾಡಬೇಕು.

### ೪) ಕರ್ಕ ಲಗ್ನ :

ಈ ಲಗ್ನಕ್ಕೆ ಮಂಗಳ, ಚಂದ್ರ, ಶುಕ್ರ ಈ ಮೂರೇ ಮೂರು ಗ್ರಹಗಳು ಕ್ರಮಶಃ ಸ್ವಆರ್ಜಿತ ವಿಷಯದ ಯೋಗಕಾರಕ ಗ್ರಹಗಳು. ಈ ಮೂರೂ ಗ್ರಹಗಳು ರಾಶಿ ಬಲದವರಾಗಿಯೂ, ಸ್ಥಾನಬಲದವರಾಗಿಯೂ ಇದ್ದರೆ, ಇಂಥ ವ್ಯಕ್ತಿಯ ಹಣ ಗಳಿಸುವ ಸಾಮರ್ಥ್ಯ ಚನ್ನಾಗಿರುತ್ತದೆ. ಆದುದರಿಂದ ೪ ಗುಣಗಳಿಗೆ ೪ ಗುಣಗಳು ಲಭ್ಯವಿರುತ್ತವೆ. ಆದರೆ ಈ ಮೂರೂ ಗ್ರಹಗಳು ದುರ್ಬಲವಿದ್ದರೆ, ಇವರಿಗೆ ಹಣಗಳಿಸುವ ಸಾಮರ್ಥ್ಯವಿರುವುದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುವವು. ಕರ್ಕ ಲಗ್ನಕ್ಕೆ ಗಮನಿಸತಕ್ಕ ಸಂಗತಿಯೆಂದರೆ, ಈ ಮೂರೂ ಗ್ರಹಗಳಲ್ಲಿ ಮಂಗಳನಿಗೆ ೨ ಗುಣಗಳು, ಶುಕ್ರನಿಗೆ ೧, ಚಂದ್ರನಿಗೆ ೧ ಗುಣ. ಹೀಗೆ ಗುಣಗಳನ್ನು ನಿರ್ಧರಿಸಲಾಗಿದೆ. ಇಲ್ಲಿ ಮಂಗಳನು ದುರ್ಬಲನಿದ್ದು, ಚಂದ್ರ-ಶುಕ್ರರು ಮಾತ್ರ ಬಲಾಢ್ಯರಿದ್ದರೆ, ಮಂಗಳನ ೨ ಗುಣಗಳು ಕಡಿಮೆ. ಆಗ ೨ ಗುಣಗಳು ಮಾತ್ರ ಲಭಿಸುವವು. ಇದರಂತೆ ಶುಕ್ರ-ಚಂದ್ರರು ನಿರ್ಬಲರಿದ್ದು, ಮಂಗಳನೊಬ್ಬನೇ ಬಲಾಢ್ಯನಿದ್ದರೂ ೨ ಗುಣಗಳು ಲಭಿಸುವವು. ಮಂಗಳನೊಂದಿಗೆ ಚಂದ್ರ, ಶುಕ್ರರಲ್ಲಿ ಯಾರೊಬ್ಬರು ಬಲಾಢ್ಯರಿದ್ದರೆ ೩ ಗುಣಗಳು ಲಭಿಸುವವು. ಇನ್ನೊಂದು ಮಹತ್ವದ ವಿಷಯವೆಂದರೆ, ಯಾವುದೊಂದು ಗ್ರಹವು ಕೇವಲ ರಾಶಿ ಬಲದವರಿದ್ದು, ಸ್ಥಾನಬಲವಿಲ್ಲದಿದ್ದರೆ, ಸ್ಥಾನಬಲವಿದ್ದು ರಾಶಿಬಲವಿಲ್ಲದಿದ್ದರೆ ½ ಗುಣ ಮಾತ್ರ ಲಭಿಸುವವು. ಮಂಗಳನು ಕೇವಲ ರಾಶಿ ಬಲದವನಿದ್ದರೆ ೧ ಗುಣ, ಕೇವಲ ಸ್ಥಾನಬಲದವನಿದ್ದರೂ ಕೂಡ ೧ ಗುಣ. ಹೀಗೆ ಆಯಾ ಗ್ರಹಗಳ ಬಲಾಬಲ ನೋಡಿ ಗುಣಮಾಪನ ಮಾಡಬೇಕು.

### ೫) ಸಿಂಹ ಲಗ್ನ :

ಈ ಲಗ್ನಕ್ಕೆ ಮಂಗಳ, ರವಿ, ಗುರು ಈ ಮೂರೂ ಗ್ರಹಗಳು ಕ್ರಮಶಃ ಸ್ವಆರ್ಜಿತ ವಿಷಯವಾಗಿ ಯೋಗಕಾರಕ ಗ್ರಹಗಳು. ಈ ಮೂರೂ ಗ್ರಹಗಳು ರಾಶಿಬಲದವರಾಗಿಯೂ, ಸ್ಥಾನಬಲದವರಾಗಿಯೂ ಇದ್ದರೆ

ಇಂಥ ಜಾತಕನ ಹಣಗಳಿಸುವ ಯೋಗ್ಯತೆ ಚನ್ನಾಗಿರುತ್ತದೆ. ಈ ಮೂರೂ ಗ್ರಹಗಳು ದುರ್ಬಲವಿದ್ದರೆ, ಇವರ ಹಣಗಳಿಸುವ ಯೋಗ್ಯತೆ ಇರುವುದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುವವು. ಸಿಂಹ ಲಗ್ನಕ್ಕೆ ಲಕ್ಷ್ಯದಲ್ಲಿಡಬೇಕಾದ ಸಂಗತಿಯೆಂದರೆ ಮಂಗಳನಿಗೆ ೨ ಗುಣಗಳು, ರವಿಗೆ ೧ ಗುಣ, ಗುರುವಿಗೆ ೧ ಗುಣಗಳನ್ನು ನಿರ್ಧರಿಸಲಾಗಿದೆ. ಇಲ್ಲಿ ಮಂಗಳನು ದುರ್ಬಲನಾಗಿ, ರವಿ–ಗುರುಗಳು ಮಾತ್ರ ಬಲಾಢ್ಯರಿದ್ದರೆ, ಮಂಗಳನ ೨ ಗುಣಗಳು ಕಡಿಮೆ ಆಗಿ ೨ ಗುಣಗಳು ಮಾತ್ರ ಲಭಿಸುವವು. ಇದರಂತೆ ಮಂಗಳನೊಬ್ಬನೇ ಬಲಾಢ್ಯನಿದ್ದು, ರವಿ–ಗುರುಗಳು ನಿರ್ಬಲನಿದ್ದರೂ ೨ ಗುಣಗಳು ಲಭಿಸುವವು ಇದಲ್ಲದೆ ಮಂಗಳನೊಂದಿಗೆ ರವಿ, ಗುರುಗಳಲ್ಲಿ ಯಾರೊಬ್ಬರು ಬಲಾಢ್ಯರಿದ್ದರೆ ೩ ಗುಣಗಳು ಲಭಿಸುವವು. ಇನ್ನೊಂದು ಮಹತ್ವದ ಸಂಗತಿಯೆಂದರೆ ಈ ಮೂರು ಗ್ರಹಗಳಲ್ಲಿ ಯಾವುದೊಂದು ಗ್ರಹ ಅಥವಾ ಯಾವುದೇ ಗ್ರಹ ಕೇವಲ ರಾಶಿಬಲದವರಿದ್ದರೆ ಅಥವಾ ಕೇವಲ ಸ್ಥಾನಬಲದವರಿದ್ದರೆ 1½ ಗುಣಗಳು ಬರುತ್ತವೆ. ಆಯಾ ಗ್ರಹಗಳ ರಾಶಿ ಬಲಕ್ಕೆ 1 ಗುಣ ಸ್ಥಾನಬಲಕ್ಕೆ ½ ಗುಣಗಳನ್ನು ಕೊಡಬೇಕು. ಮಂಗಳನು ಕೇವಲ ರಾಶಿ ಬಲದವನಿದ್ದರೆ ೧ ಗುಣ, ಕೇವಲ ಸ್ಥಾನಬಲದವನಿದ್ದರೂ ೧ ಗುಣ. ಹೀಗೆ ಸಿಂಹ ಲಗ್ನದ ಮಂಗಳ, ರವಿ, ಗುರುಗಳ ಬಲಾಬಲವನ್ನು ನೋಡಿ ಗುಣ ಮಾಪನ ಮಾಡಬೇಕು,

### ೬) ಕನ್ಯಾ ಲಗ್ನ :

ಈ ಲಗ್ನಕ್ಕೆ ಸ್ವಅರ್ಜಿತ ವಿಷಯವಾಗಿ ಬುಧ.ಗುರುಗಳಿಬ್ಬರೇ ಯೋಗ ಕಾರಕಗಳು. ಈ ಎರಡೂ ಗ್ರಹಗಳು ರಾಶಿಬಲದವರಾಗಿಯೂ, ಸ್ಥಾನ ಬಲದವರಾಗಿಯೂ ಇದ್ದರೆ ಇವರ ಹಣಗಳಿಸುವ ಸಾಮರ್ಥ್ಯ ಉತ್ತಮವಿರುವುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುವವು. ಈ ಎರಡು ಗ್ರಹಗಳು ದುರ್ಬಲರಾಗಿದ್ದರೆ, ಇವರ ಹಣಗಳಿಸುವ ಸಾಮರ್ಥ್ಯವಿರುವುದಿಲ್ಲವಾದ್ದರಿಂದ ಶೂನ್ಯಗುಣ ಬರುತ್ತದೆ. ಈ ಎರಡು ಗ್ರಹಗಳಲ್ಲಿ ಯಾವುದಾದರೊಂದು ಗ್ರಹ ಬಲಾಢ್ಯವಿದ್ದು, ಇನ್ನೊಂದು ಗ್ರಹ ದುರ್ಬಲವಿದ್ದರೆ ೨ ಗುಣಗಳು ಮಾತ್ರ ಲಭಿಸುವವು. ಈ ಎರಡೂ ಗ್ರಹಗಳಲ್ಲಿ ಯಾವ

ದೊಂದು ಗ್ರಹ ಇಲ್ಲವೇ ಎರಡೂ ಗ್ರಹಗಳು ಕೇವಲ ರಾಶಿಬಲದವರಿದ್ದರೆ ೧ ಗುಣ, ಕೇವಲ ಸ್ಥಾನಬಲವಿದ್ದರೂ ೧ ಗುಣ. ಹೀಗೆ ಕನ್ಯಾ ಲಗ್ನದ ಬುಧ, ಗುರುಗಳ ಬಲಾಬಲವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಗುಣಮಾಪನ ಮಾಡಬೇಕು.

## ೭) ತುಲಾ ಲಗ್ನ :

ಈ ಲಗ್ನಕ್ಕೆ ಶನಿ, ಶುಕ್ರ, ಚಂದ್ರ ಈ ಮೂರೂ ಗ್ರಹಗಳು ಕ್ರಮಶಃ ಸ್ವಆರ್ಜಿತ ವಿಷಯದ ಯೋಗಕಾರಕ ಗ್ರಹಗಳು. ಈ ಮೂರೂ ಗ್ರಹಗಳು ರಾಶಿಬಲದವರಾಗಿಯೂ, ಸ್ಥಾನಬಲದವರಾಗಿಯೂ ಇದ್ದರೆ, ಇವರ ಹಣಗಳಿಸುವ ಯೋಗ್ಯತೆ ಚೆನ್ನಾಗಿರುತ್ತದೆ. ಆದುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುವವು. ಆದರೆ ಈ ಮೂರೂ ಗ್ರಹಗಳು ದುರ್ಬಲವಿದ್ದರೆ, ಇವರ ಹಣಗಳಿಸುವ ಸಾಮರ್ಥ್ಯವಿರುವದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುವವು. ತುಲಾ ಲಗ್ನಕ್ಕೆ ಗಮನಿಸತಕ್ಕ ಸಂಗತಿಯೆಂದರೆ, ಶನಿಗೆ ೨ ಗುಣಗಳನ್ನು, ಶುಕ್ರನಿಗೆ ೧ ಗುಣವನ್ನು, ಚಂದ್ರನಿಗೆ ೧ ಗುಣವನ್ನು ನಿರ್ಧರಿಸಿದೆ. ಇಲ್ಲಿ ಶನಿಯು ದುರ್ಬಲನಿದ್ದು, ಶುಕ್ರ, ಚಂದ್ರರು ಮಾತ್ರ ಬಲಾಢ್ಯಗಳಿದ್ದರೆ ಶನಿಯ ೨ ಗುಣಗಳು ಕಡಿಮೆ ಆಗಿ, ಬಲಾಢ್ಯ ಶುಕ್ರ, ಚಂದ್ರರ ೨ ಗುಣಗಳು ಮಾತ್ರ ಲಭಿಸುವವು. ಇದರಂತೆ ಶನಿಯು ಬಲಾಢ್ಯನಿದ್ದು, ಶುಕ್ರ–ಚಂದ್ರರು ದುರ್ಬಲರಿದ್ದರೂ ೨ ಗುಣಗಳು ಲಭಿಸುವವು. ಆದರೆ ಬಲಾಢ್ಯ ಶನಿಯೊಂದಿಗೆ ಶುಕ್ರ-ಚಂದ್ರರಲ್ಲಿ ಯಾರೊಬ್ಬರು ಬಲಾಢ್ಯರಿದ್ದರೂ ೩ ಗುಣಗಳು ಲಭಿಸುವವು. ಇನ್ನೊಂದು ಮಹತ್ವದ ಸಂಗತಿಯೆಂದರೆ ಚಂದ್ರ, ಶುಕ್ರ ಯಾವುದೊಂದು ಗ್ರಹವು ಕೇವಲ ರಾಶಿಬಲದವರಿದ್ದರೆ ಅಥವಾ ಕೇವಲ ಸ್ಥಾನಬಲದವರಿದ್ದರೂ ½ ಗುಣ. ಶನಿಯು ಮಾತ್ರ ರಾಶಿಬಲದವನಿದ್ದರೆ ೧ ಗುಣ, ಸ್ಥಾನಬಲ ಮಾತ್ರನಿದ್ದರೆ ೧ ಗುಣ ಲಭಿಸುತ್ತದೆ. ಹೀಗೆ ಆಯಾ ಗ್ರಹಗಳ ಬಲಾಬಲವನ್ನು ಸೂಕ್ಷ್ಮವಾಗಿ ಅವಲೋಕಿಸಿ ಗುಣ ಮಾಪನ ಮಾಡಬೇಕು.

### ೮) ವೃಶ್ಚಿಕ ಲಗ್ನ :

ಈ ಲಗ್ನಕ್ಕೆ ರವಿ, ಚಂದ್ರ, ಶನಿ, ಗುರುಗಳು ಕ್ರಮಶ: ಸ್ವಆರ್ಜಿತ ವಿಷಯದ ಯೋಗಕಾರಕ ಗ್ರಹಗಳು. ಈ ನಾಲ್ಕು ಗ್ರಹಗಳು ರಾಶಿಬಲ ದವರಾಗಿಯೂ, ಸ್ಥಾನಬಲದವರಾಗಿಯೂ ಇದ್ದರೆ ಇವರ ಹಣಗಳಿಸುವ ಸಾಮರ್ಥ್ಯ ಚೆನ್ನಾಗಿರುವುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುವವು. ಆದರೆ ಈ ನಾಲ್ಕು ಗ್ರಹಗಳು ದುರ್ಬಲರಿದ್ದರೆ, ಇವರ ಹಣಗಳಿಸುವ ಸಾಮರ್ಥ್ಯ ಚೆನ್ನಾಗಿರುವುದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುವವು. ಈ ನಾಲ್ಕು ಗ್ರಹಗಳಲ್ಲಿ ಯಾವುದೊಂದು ಗ್ರಹ ದುರ್ಬಲವಿದ್ದರೆ ಅಥವಾ ೨-೩ ಗ್ರಹಗಳು ದುರ್ಬಲವಿದ್ದರೆ, ಪ್ರತಿಗ್ರಹಕ್ಕೂ ಒಂದೊಂದು ಗುಣದಂತೆ ಕಡಿಮೆ ಆಗುತ್ತವೆ. ಉದಾಹರಣೆಗೆ ಈ ನಾಲ್ಕು ಗ್ರಹಗಳಲ್ಲಿ ವೃಶ್ಚಿಕ ಲಗ್ನಕ್ಕೆ ಚಂದ್ರನು ನಿರ್ಬಲನಿದ್ದು ರವಿ, ಗುರು, ಶನಿಯರು ಬಲಾಢ್ಯರಿದ್ದಾರೆ ಎಂದು ತಿಳಿದರೆ ಚಂದ್ರನ ೧ ಗುಣ ಕಳೆದು ೩ ಗುಣಗಳು ಲಭ್ಯವಾಗುವವು. ಹೀಗೆ ಪ್ರತಿಯೊಂದು ಗ್ರಹಕ್ಕೂ ಒಂದೊಂದು ಗುಣಗಳಿರುತ್ತವೆ. ಆದರೆ ಒಂದು ಸಂಗತಿ ನೆನಪಿನಲ್ಲಿಡಿರಿ, ಬಲಾಢ್ಯವಿರುವ ಗ್ರಹ ಅಥವಾ ಗ್ರಹಗಳು ರಾಶಿಬಲದವರೂ, ಸ್ಥಾನಬಲದವರೂ ಇದ್ದರೆ ಮಾತ್ರ ೧ ಗುಣ, ಕೇವಲ ರಾಶಿ ಬಲ ಇದ್ದರೆ ½ ಗುಣ. ಕೇವಲ ಸ್ಥಾನಬಲವಿದ್ದರೂ ½ ಗುಣಗಳು ಲಭಿಸುವವು. ಹೀಗೆ ಆಯಾ ಗ್ರಹಗಳ ಬಲಾಬಲ ಅವಲೋಕಿಸಿ ಗುಣ ಮಾಪನ ಮಾಡಬೇಕು.

### ೯) ಧನು ಲಗ್ನ :

ಈ ಲಗ್ನಕ್ಕೆ ಗುರು, ಬುಧ, ರವಿ, ಮಂಗಳರು ಕ್ರಮಶಃ ಸ್ವಆರ್ಜಿತ ವಿಷಯವಾಗಿ ಯೋಗಕಾರಕ ಗ್ರಹಗಳಿರುತ್ತಾರೆ; ಈ ನಾಲ್ಕೂ ಗ್ರಹಗಳು ರಾಶಿಬಲದವರಾಗಿಯೂ, ಸ್ಥಾನಬಲದವರಾಗಿಯೂ ಇದ್ದರೆ ಇವರ ಹಣಗಳಿಸುವ ಸಾಮರ್ಥ್ಯ ಚೆನ್ನಾಗಿರುತ್ತದೆ. ಆದುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುತ್ತವೆ. ಈ ನಾಲ್ಕು ಗ್ರಹಗಳು ದುರ್ಬಲವಿದ್ದರೆ, ಇವರ ಹಣಗಳಿಸುವ ಸಾಮರ್ಥ್ಯವಿರುವುದಿಲ್ಲವಾದುದರಿಂದ ಶೂನ್ಯಗುಣ ಲಭಿಸುತ್ತದೆ, ಈ ನಾಲ್ಕು ಗ್ರಹಗಳಲ್ಲಿ ಯಾವುದಾದರೊಂದು ಗ್ರಹ ದುರ್ಬಲವಿದ್ದರೆ

ಅಥವಾ ೨-೩ ಗ್ರಹಗಳು ದುರ್ಬಲವಿದ್ದರೆ ಪ್ರತಿ ಗ್ರಹಕ್ಕೂ ಒಂದೊಂದು ಗುಣದಂತೆ ಕಡಿಮೆ ಆಗುತ್ತದೆ. ಉದಾಹರಣೆಗೆ ಧನು ಲಗ್ನದ ಜಾತಕನಿಗೆ ಬುಧನು ನಿರ್ಬಲನಿದ್ದು, ಉಳಿದ ಮೂರೂ ಗ್ರಹಗಳಿಗೆ ರವಿ, ಮಂಗಳ, ಗುರುಗಳು ಬಲಾಢ್ಯರಿದ್ದರೆ ೧, ದುರ್ಬಲ ಬುಧನ ೧ ಗುಣ ಕಳೆದು ೩ ಗುಣಗಳು ಲಭಿಸುವವು. ಹೀಗೆ ಪ್ರತಿಯೊಂದು ಗ್ರಹಕ್ಕೂ ಒಂದೊಂದು ಗುಣ ಲಭಿಸುತ್ತದೆ. ಆದರೆ ಇಲ್ಲಿ ಮಹತ್ವದ ಸಂಗತಿಯೆಂದರೆ ಬಲಾಢ್ಯ ಗ್ರಹವು ರಾಶಿ ಬಲದವು, ಸ್ಥಾನಬಲದವುಗಳಿದ್ದರೆ ಮಾತ್ರ ಆಯಾ ಗ್ರಹಕ್ಕೆ ಒಂದೊಂದು ಗುಣ ಲಭಿಸುತ್ತವೆ. ಯಾವುದೊಂದು ಗ್ರಹ ಕೇವಲ ರಾಶಿ ಬಲವಿದ್ದು, ಸ್ಥಾನಬಲವಿಲ್ಲದಿದ್ದರೆ $\frac{1}{2}$ ಗುಣ ಲಭಿಸುತ್ತವೆ. ಇದರಂತೆ ಕೇವಲ ಸ್ಥಾನಬಲವಿದ್ದು ರಾಶಿಬಲವಿಲ್ಲದಿದ್ದರೂ $\frac{1}{2}$ ಗುಣ ಲಭಿಸುತ್ತವೆ. ಹೀಗೆ ಆಯಾ ಗ್ರಹಗಳ ಬಲಾಬಲವನ್ನು ತೂಗಿ ಗುಣಮಾಪನ ಮಾಡಬೇಕು.

## ೧೦) ಮಕರ ಲಗ್ನ :

ಈ ಲಗ್ನಕ್ಕೆ ಶುಕ್ರ, ಬುಧ, ಮಂಗಳ ಈ ಮೂರೂ ಗ್ರಹಗಳು ಮಾತ್ರ ಕ್ರಮಶಃ ಸ್ವಅರ್ಜಿತ ವಿಷಯವಾಗಿ ಕಾರಕ ಗ್ರಹಗಳು. ಈ ಮೂರು ಗ್ರಹಗಳು ರಾಶಿಬಲದವರಾಗಿಯೂ, ಸ್ಥಾನಬಲದವರಾಗಿಯೂ ಇದ್ದರೆ ಮಾತ್ರ ಇವರ ಹಣಗಳಿಸುವ ಸಾಮರ್ಥ್ಯ ಚನ್ನಾಗಿರುತ್ತದೆ. ಆದುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುವವು. ಈ ನಾಲ್ಕು ಗ್ರಹಗಳು ದುರ್ಬಲವಾಗಿದ್ದರೆ ಹಣ ಗಳಿಸುವ ಚೈತನ್ಯವಿರುವುದಿಲ್ಲವಾದುದರಿಂದ ಶೂನ್ಯಗುಣಗಳು ಲಭಿಸುವವು. ಆದರೆ ಮಕರ ಲಗ್ನದ ಒಂದು ಮಹತ್ವದ ಸಂಗತಿಯೆಂದರೆ ಶುಕ್ರ, ಬುಧ, ಮಂಗಳರಲ್ಲಿ ಶುಕ್ರನಿಗೆ ೨ ಗುಣಗಳು. ಬುಧನಿಗೆ ೧ ಗುಣ, ಮಂಗಳನಿಗೆ ೧ ಗುಣ ನಿರ್ಧರಿಸಲಾಗಿದೆ. ಇಲ್ಲಿ ಶುಕ್ರನು ದುರ್ಬಲನಿದ್ದು, ಬುಧ, ಮಂಗಳರು ಬಲಾಢ್ಯರಿದ್ದರೆ ೨ ಗುಣಗಳು ಲಭಿಸುತ್ತವೆ. ಇದರಂತೆ ಶುಕ್ರನು ಬಲಾಢ್ಯನಿದ್ದು, ಬುಧ, ಮಂಗಳರು ದುರ್ಬಲವಿದ್ದರೂ ಕೂಡ ೨ ಗುಣ ಲಭಿಸುತ್ತವೆ. ಆದರೆ ಬಲಾಢ್ಯ ಶುಕ್ರನೊಂದಿಗೆ ಬುಧ, ಮಂಗಳರಲ್ಲಿ ಯಾರೊಬ್ಬರು ಬಲಾಢ್ಯರಿದ್ದರೂ ೩ ಗುಣ ಲಭಿಸುತ್ತವೆ. ಆದರೆ ಒಂದು ಸಂಗತಿ ಯಾವುದೇ ಗ್ರಹ ಬಲಾಢ್ಯನೆಂದರೆ ರಾಶಿಬಲದವರೂ ಸ್ಥಾನಬಲ

ದವರೂ ಇರಬೇಕು; ಅಂದರೆ ಮಾತ್ರ ಸಂಪೂರ್ಣ ಗುಣ ಲಭಿಸುತ್ತವೆ. ಅಂದರೆ ಶುಕ್ರನು ರಾಶಿ ಬಲದವನೂ, ಸ್ಥಾನಬಲದವನೂ ಇದ್ದರೆ ಮಾತ್ರ ೨ ಗುಣಗಳು. ಕೇವಲ ರಾಶಿ ಬಲ ಇಲ್ಲವೆ ಸ್ಥಾನಬಲವಿದ್ದರೆ ೧ ಗುಣ ಮಾತ್ರ ಲಭಿಸುತ್ತದೆ. ಇದರಂತೆ ಬುಧ, ಮಂಗಳರು ಕೇವಲ ರಾಶಿಬಲದವ ರಿದ್ದರೆ ½ ಗುಣವು. ಕೇವಲ ಸ್ಥಾನಬಲವಿದ್ದರೂ ಕೂಡ ½ ಗುಣ ಲಭಿಸು ತ್ತವೆ. ಹೀಗೆ ಆಯಾ ಗ್ರಹದ ಗ್ರಹಗಳ ಬಲಾಬಲವನ್ನು ಸರಿಯಾಗಿ ಅಭ್ಯ ಸಿಸಿ ಗುಣಮಾಪನ ಮಾಡಬೇಕು.

೧೧) ಕುಂಭ ಲಗ್ನ :

ಈ ಲಗ್ನಕ್ಕೆ ಶುಕ್ರ, ಶನಿ ಇಬ್ಬರೆ ಕ್ರಮಶಃ ಸ್ವಅರ್ಜಿತ ವಿಷಯವಾಗಿ ಕಾರಕ ಗ್ರಹಗಳು. ಈ ಎರಡೂ ಗ್ರಹಗಳು ರಾಶಿಬಲದವರಾಗಿಯೂ ಸ್ಥಾನಬಲದವರಾಗಿಯೂ ಇದ್ದರೆ ಮಾತ್ರ ಇವರ ಹಣ ಗಳಿಸುವ ಸಾಮರ್ಥ್ಯ ಉತ್ತಮವಿರುತ್ತದೆ. ಆದುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸು ವವು. ಆದರೆ ಈ ಎರಡೂ ಗ್ರಹಗಳು ದುರ್ಬಲವಿದ್ದರೆ ಇವರ ಹಣ ಗಳಿ ಸುವ ಯೋಗ್ಯತೆ ಇರುವುದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುವವು. ಆದರೆ ಕುಂಭ ಲಗ್ನದವರು ಗಮನಿಸತಕ್ಕ ಸಂಗತಿಯೆಂದರೆ, ಇಲ್ಲಿ ಬಲಾಢ್ಯ ಶುಕ್ರನಿಗೆ ೩ ಗುಣಗಳು, ಬಲಾಢ್ಯ ಶನಿಗೆ ೧ ಗುಣವು ನಿರ್ಧರಿಸಲಾಗಿದೆ. ಇಲ್ಲಿ ಶುಕ್ರನು ಬಲಾಢ್ಯನಿದ್ದು, ಶನಿಯು ದುರ್ಬಲನಿದ್ದರೆ ೩ ಗುಣಗಳು, ಶನಿಯು ಬಲಾಢ್ಯನಿದ್ದು, ಶುಕ್ರನು ದುರ್ಬಲನಿದ್ದರೆ ೧ ಗುಣ ಲಭಿಸುತ್ತದೆ. ಶುಕ್ರನು ರಾಶಿಬಲದವನಿದ್ದು, ಸ್ಥಾನಬಲದವನಿಲ್ಲದಿದ್ದರೆ 1½ ಗುಣವು. ಕೇವಲ ಸ್ಥಾನಬಲದವನಿದ್ದು, ರಾಶಿ ಬಲದವನಿಲ್ಲದಿದ್ದರೂ 1½ ಗುಣ ಲಭಿ ಸುತ್ತದೆ. ಇದರಂತೆ ಶನಿಯು ಕೇವಲ ರಾಶಿಬಲದವನಿದ್ದು, ಸ್ಥಾನಬಲದವ ನಿಲ್ಲದಿದ್ದರೆ ½ ಗುಣ. ಅದರಂತೆ ಕೇವಲ ಸ್ಥಾನಬಲದವನಿದ್ದು ರಾಶಿ ಬಲ ದವನಿಲ್ಲದಿದ್ದರೂ ½ ಗುಣ ಲಭಿಸುತ್ತದೆ. ಕುಂಭ ಲಗ್ನದವರು ಶುಕ್ರ–ಶನಿ ಯರ ಬಲಾಬಲದ ಮೇಲೆ ಮಾತ್ರ ಸ್ವಅರ್ಜಿತ ವಿಷಯವಾಗಿ ಗುಣಮಾಪನ ಮಾಡಬೇಕು.

## ೧೨) ಮೀನ ಲಗ್ನ :

ಈ ಲಗ್ನಕ್ಕೆ ಗುರು, ಬುಧ, ಚಂದ್ರರು ಕ್ರಮಶಃ ಸ್ವಆರ್ಜಿತ ವಿಷಯವಾಗಿ ಕಾರಕ ಗ್ರಹಗಳು. ಈ ಮೂರೂ ಗ್ರಹಗಳು ಬಲಾಢ್ಯರಿದ್ದರೆ ಮಾತ್ರ ಇವರು ಹಣ ಗಳಿಸುವ ಸಾಮರ್ಥ್ಯಉಳ್ಳವರಿರುತ್ತಾರೆ. ಈ ಮೂರೂ ಗ್ರಹಗಳು ದುರ್ಬಲವಿದ್ದರೆ ಹಣ ಗಳಿಸುವ ಸಾಮರ್ಥ್ಯವಿರುವುದಿಲ್ಲವಾದುದರಿಂದ ಶೂನ್ಯ ಗುಣಗಳು ಲಭಿಸುವವು. ಆದರೆ ಇಲ್ಲಿ ಮಹತ್ವದ ಸಂಗತಿಯೆಂದರೆ, ಬಲಾಢ್ಯ ಗುರುವಿಗೆ ೨ ಗುಣಗಳನ್ನು, ಬಲಾಢ್ಯ ಬುಧನಿಗೆ ೧ ಗುಣವನ್ನು, ಬಲಾಢ್ಯ ಚಂದ್ರನಿಗೆ ೧ ಗುಣವನ್ನು ನಿರ್ಧರಿಸಲಾಗಿದೆ. ಆದುದರಿಂದ ಗುರುವು ರಾಶಿಬಲದವನೂ, ಸ್ಥಾನಬಲದವನೂ ಇದ್ದರೆ ೨ ಗುಣಗಳು ಲಭಿಸುತ್ತವೆ. ಗುರುವು ಕೇವಲ ರಾಶಿ ಬಲದವನಿದ್ದರೆ ೧ ಗುಣ. ಕೇವಲ ಸ್ಥಾನಬಲದವನಿದ್ದರೂ ೧ ಗುಣ. ಆದರೆ ನಿರ್ಬಲ ಗುರುವಿದ್ದು ಬುಧ-ಚಂದ್ರರು ಬಲಾಢ್ಯರಿದ್ದರೆ ೩ ಗುಣಗಳು ಲಭಿಸುತ್ತವೆ. ಬಲಾಢ್ಯ ಗುರುವಿನೊಂದಿಗೆ ಬುಧ, ಚಂದ್ರರಲ್ಲಿ ಯಾರೊಬ್ಬರು ಬಲಾಢ್ಯರಿದ್ದರೂ ಕೂಡ ೩ ಗುಣಗಳು ಲಭಿಸುತ್ತವೆ. ಬುಧ, ಚಂದ್ರರು ಕೇವಲ ರಾಶಿ ಬಲದವರಿದ್ದರೆ ½ ಗುಣವು. ಕೇವಲ ಸ್ಥಾನಬಲವಿದ್ದರೂ ಕೂಡ ½ ಗುಣ ಲಭಿಸುತ್ತವೆ. ಹೀಗೆ ಮೀನ ಲಗ್ನಕ್ಕೆ ಗುರು, ಬುಧ, ಚಂದ್ರರ ಬಲಾಬಲವನ್ನು ತೂಗಿ ಗುಣಸ್ಥಾಪನ ಮಾಡಬೇಕು.

ಹೀಗೆ ಸ್ವಾರ್ಜಿತ ವಿಷಯವಾಗಿ ಅರ್ಥಾತ್ ಹಣಗಳಿಸುವ ಸಾಮರ್ಥ್ಯದ ವಿಷಯವಾಗಿ ವಿಭಿನ್ನ ಲಗ್ನಗಳ ವಿಭಿನ್ನ ಯೋಗಕಾರಕ ಗ್ರಹಗಳು ಇರುತ್ತವೆ.

## ೩) ಆಕಸ್ಮಿಕ ಧನಯೋಗ :

ಸ್ವಆರ್ಜಿತಕ್ಕೆ ೪ ಗುಣಗಳು, ಪಿತ್ರಾರ್ಜಿತಕ್ಕೆ ೩ ಗುಣಗಳು, ಆಕಸ್ಮಿಕ ಧನಯೋಗಕ್ಕೆ ೩ ಗುಣಗಳು ನಿರ್ಧರಿಸಿದ್ದು, ಒಟ್ಟಿನಲ್ಲಿ ಯಾರೊಬ್ಬರ ಆರ್ಥಿಕ ಸ್ಥಿತಿಯ ವಿಷಯವಾಗಿ ೧೦ ಗುಣಗಳನ್ನು ನಿರ್ಧರಿಸಲಾಗಿದೆ.

ಆಕಸ್ಮಿಕ ಧನಯೋಗವೆಂದರೆ ಲಾಟರಿಯಿಂದಾಗಲಿ, ರೇಸುಗಳಿಂದಾಗಲಿ ಭೂಗತದಿಂದಾಗಲಿ ಹಣ ಪಡೆಯುವ ಯೋಗವೆಂದು ಅನೇಕರು ಭಾವಿಸಿದ್ದಾರೆ. ಆದರೆ ಇದು ತಪ್ಪು ಕಲ್ಪನೆ. ಲಾಟರಿ, ರೇಸು, ಭೂಗತಗಳಿಂದ ಧನ ಪಡೆಯುವುದು. ಆಕಸ್ಮಿಕ ಧನಯೋಗವೇನೋ ಹೌದು. ಆದರೆ ಈ ಮೂರೂ ರೀತಿಯಿಂದ ಹೊರತಾಗಿಯೂ ಇನ್ನೂ ಅನೇಕ ಸಂಗತಿಗಳಿವೆ. ಆಕಸ್ಮಿಕ ಧನಯೋಗವೆಂದರೆ, ಅನಿರೀಕ್ಷಿತವಾಗಿ ಹಣ ಪಡೆಯುವಿಕೆ. ಸ್ವ-ಆರ್ಜಿತ ಹಾಗೂ ಪಿತ್ರಾರ್ಜಿತ ಹೊರತಾಗಿ ಅನಿರೀಕ್ಷಿತವಾಗಿ ಪಡೆಯುವ ಹಣ. ಇದು ದತ್ತಕ, ಬಕ್ಷೀಸ, ಬಹುಮಾನ, ವಾರಸಾ, ಸ್ತ್ರೀಧನ, ಲಂಚ, ಕಾಣಿಕೆ, ಜೂಜು, ಪಂದ್ಯ, ಮೃತ್ಯು ಪತ್ರದಿಂದ, ಸಟ್ಟಾ ಇವುಗಳಿಂದಾಗಲಿ, ಸರಕಾರ ಹಾಗೂ ಸಂಘ ಸಂಸ್ಥೆಗಳಿಂದ ಬರುವ ಗೌರವಧನ ಹೀಗೆ ಈ ಆಕಸ್ಮಿಕ ಧನಯೋಗದ ವ್ಯಾಪ್ತಿ ಬಹಳ ಇದೆ. ಆದರೆ ಒಂದು ಸಂಗತಿ ನಿಜ ಈ ಶುಭಯೋಗವು ಎಲ್ಲರಿಗೂ ಲಭಿಸುವುದಿಲ್ಲ. ಕೆಲವು ವ್ಯಕ್ತಿಗಳಿಗೆ ಮಾತ್ರ ಲಭಿಸುತ್ತದೆ. ಆದುದರಿಂದ ಆಕಸ್ಮಿಕ ಧನಯೋಗ ಪಡೆಯುವ ಜಾತಕ ಹೇಗಿರುತ್ತದೆ. ಕಾರಕ ಗ್ರಹ, ಸ್ಥಾನಾದಿಗಳಾವವು, ಆಕಸ್ಮಿಕ ಧನಯೋಗದ ಗುಣಮಾಪನ ಹೇಗೆ ಮಾಡಬೇಕೆಂಬುದನ್ನು ಪರಿಶೀಲಿಸುವಾ.

ಆಕಸ್ಮಿಕ ಧನಯೋಗದ ವಿಷಯವಾಗಿ ನಾವು ಬರೆದು ಪ್ರಕಟಿಸಿದ "ಆಕಸ್ಮಿಕ ಧನಯೋಗ" ಎಂಬ ನಮ್ಮ ಗ್ರಂಥದಲ್ಲಿ ವಿಪರ ವಿವರವಾಗಿ ವಿಶ್ಲೇಷಿಸಲಾಗಿದೆ. ಆ ಗ್ರಂಥವನ್ನು ಅಧ್ಯಯನ ಮಾಡಿದಾಗ ಆಕಸ್ಮಿಕ ಧನಯೋಗದ ಜಾತಕ ಹೇಗಿರುತ್ತದೆ ಎಂಬುದರ ಸಂಪೂರ್ಣ ಕಲ್ಪನೆ ಬರುತ್ತದೆ. ಪ್ರಸ್ತುತಃ ಈ ಅಧ್ಯಾಯಕ್ಕೆ ಸಂಬಂಧಿಸಿದ ವಿಷಯದ ಸ್ಥೂಲ ರೂಪರೇಷೆಗಳನ್ನು ಮಾತ್ರ ಇಲ್ಲಿ ಮಾಡಲಾಗಿದೆ.

ಆಕಸ್ಮಿಕ ಧನಯೋಗದ ವಿಷಯವಾಗಿ ತಿಳಿಯಲು ನಾವು ಮೂರು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ೧) ಅಷ್ಟಮಸ್ಥಾನ ಹಾಗೂ ಅಷ್ಟಮೇಶನ ಬಲಾಬಲ, ೨) ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲ, ೩) ಆಕಸ್ಮಿಕ ಧನಯೋಗದ ಯೋಗಗಳು. ಈ ಮೂರೂ

ಸಂಗತಿಗಳ ಮೇಲಿಂದ ಯಾವುದೊಂದು ಜಾತಕದ ಆಕಸ್ಮಿಕ ಧನಯೋಗದ ಸ್ಥೂಲ ಕಲ್ಪನೆ ಬರುತ್ತದೆ. ಅವುಗಳ ವಿವರಣೆ ಹೀಗಿದೆ.

## ೧) ಅಷ್ಟಮಸ್ಥಾನ ಹಾಗೂ ಅಷ್ಟಮೇಶನ ಬಲಾಬಲದ ವಿಷಯವಾಗಿ :

ಎಷ್ಟೋ ಜ್ಯೋತಿಷಿಗಳು ಅಷ್ಟಮ ಸ್ಥಾನವನ್ನು ಪೂರ್ಣವಾಗಿ ಪರಿಶೀಲಿಸುವುದಿಲ್ಲ ಎನ್ನುವುದಕ್ಕಿಂತ, ನಿರ್ಲಕ್ಷ್ಯ ಮಾಡುವರು ಎಂದರೆ ಹೆಚ್ಚು ಸಮಂಜಸವಾಗುತ್ತದೆ. ಇನ್ನು ಕೆಲ ಜ್ಯೋತಿಷಿಗಳು ಮಗು ಜನಿಸಿದಾಗ ಜನನ ನಕ್ಷತ್ರಾದಿಗಳನ್ನು ನೋಡುವಾಗ, ಜನಿಸಿದ ಕೂಸಿಗೆ ಬಾಲಾರಿಷ್ಟಯೋಗ ವಿದೆಯೋ ಹೇಗೆ ಎಂಬುದನ್ನು ತಿಳಿಯಲು ಆಗಮಾತ್ರ ಅಷ್ಟಮ ಸ್ಥಾನವನ್ನು ಪರಿಶೀಲಿಸುತ್ತಾರೆ. ಮತ್ತೆ ಕೆಲ ಜ್ಯೋತಿಷಿಗಳು ರೋಗದ ವಿಷಯ ವಾಗಿಯೂ, ಅದರಲ್ಲಿಯೂ ಅಪರಿಹಾರ ರೋಗದ ವಿಷಯವಾಗಿ (ಇನ್-ಕ್ಯುರೇಬಲ್) ಆ ಜಾತಕನ ಆಯುಷ್ಯವನ್ನು, ಆಯುರ್ದಾಯವನ್ನು ಅರಿಯಲು ಇಲ್ಲವೆ ಯಾರೊಬ್ಬ ಜಾತಕನು ಮೃತ್ಯುಪತ್ರ ಉಯಿಲು ಬರೆಯುವ ಶುಭ ವೇಳೆಯನ್ನು ಕೇಳಲು ಬಂದಾಗ ಮಾತ್ರ, ಆ ಜಾತಕನ ಅಷ್ಟಮಸ್ಥಾನ ಪರಿಶೀಲಿಸುವರು. ಇನ್ನು ಕೆಲವರು ವಾಹನ ಕೊಳ್ಳಲು ಇಲ್ಲವೇ ಚಲಾಯಿಸಲು ಹೇಗೆ ಎಂಬ ಪ್ರಶ್ನೆ ಬಂದಾಗ, ಆ ಜಾತಕನ ಅಪಘಾತದ ಭಯ ವಿದೆಯೋ ಹೇಗೆ ಎಂಬುದನ್ನು ತಿಳಿದುಕೊಳ್ಳಲು, ಆಗ ಮಾತ್ರ ಅಷ್ಟಮ ಸ್ಥಾನವನ್ನು ಪರಿಶೀಲಿಸುತ್ತಾರೆ ವಿನಃ ಸಾಮಾನ್ಯ ಸ್ಥಿತಿಯಲ್ಲಿ ಅಷ್ಟಮಸ್ಥಾನ ವನ್ನು ಪರಿಶೀಲಿಸುವುದಿಲ್ಲ. ಆದರೆ ಇತ್ತೀಚಿಗೆ ಲಾಟರಿಯಿಂದ ಆಕಸ್ಮಿಕ ಧನಯೋಗದ ಲಭಿಸುವುದೋ ಹೇಗೆ ಎಂಬ ಪ್ರಶ್ನೆ ಬಂದಾಗ ಅಷ್ಟಮಸ್ಥಾನ ವನ್ನು ಪರಿಶೀಲಿಸುತ್ತಾರೆ. ಆದರೆ ಆಕಸ್ಮಿಕ ಧನಯೋಗವೆಂದರೆ ಕೇವಲ ಲಾಟರಿಯಿಂದ ಮಾತ್ರ ಎಂದು ಅನೇಕರ ಭಾವನೆ. ಲಾಟರಿ ಹೊರತಾಗಿ ಆಕಸ್ಮಿಕ ಧನಯೋಗದ ಅನೇಕ ಸಂಗತಿಗಳಿವೆ ಎಂಬುದನ್ನು ಹಿಂದಿನ ಪುಟದಲ್ಲಿ ವಿವರಿಸಲಾಗಿದೆ.

೧) ಅಷ್ಟಮಸ್ಥಾನದ ಬಲಾಬಲದ ವಿಷಯವಾಗಿ ಪರಿಶೀಲಿಸಬೇಕು ಎಂದರೆ ಅಷ್ಟಮಸ್ಥಾನದಲ್ಲಿರುವ ಗ್ರಹಗಳ ಬಲಾಬಲವನ್ನು, ಗುಣಧರ್ಮವನ್ನು

ಪರಿಶೀಲಿಸಬೇಕೆಂಬುದೇ ಮತಿತಾರ್ಥವು. ಅಷ್ಟಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ ಆಕಸ್ಮಿಕ ಧನಪ್ರಾಪ್ತಿಯಾಗುತ್ತದೆ. ಆದರೆ ಆ ಗ್ರಹದ ಗುಣ ಧರ್ಮದಂತೆ ಆಕಸ್ಮಿಕ ಧನಯೋಗದ ಪ್ರಕಾರಗಳಲ್ಲಿ ಲಭಿಸುತ್ತದೆ. ಉದಾಹರಣೆಗೆ ಗುರು, ಶುಕ್ರರು ಬಲಾಢ್ಯರಾಗಿ ಅಷ್ಟಮದಲ್ಲಿದ್ದರೆ ದತ್ತಕ,ಸ್ತ್ರೀಧನ, ವಾರಸಾ, ಉಯಿಲು ಇತ್ಯಾದಿ. ರಾಹು, ಮಂಗಳ ಅಷ್ಟಮ ಸ್ಥಾನದಲ್ಲಿ ಬಲಾಢ್ಯರಿದ್ದರೆ ಲಾಟರಿ, ಸಟ್ಟಾ ಮುಖಾಂತರ. ಹೀಗೆ ವಿವಿಧ ಗ್ರಹಗಳ ಗುಣ ಧರ್ಮದಂತೆ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ. ಅಷ್ಟಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ ೧ ಗುಣ ಲಭಿಸುತ್ತದೆ. ಅಷ್ಟಮೇಶನು ಬಲಾಢ್ಯನಾಗಿದ್ದರೂ ಕೂಡ ೧ ಗುಣ ಲಭಿಸುತ್ತದೆ. ಈ ಹಿಂದೆ ಹೇಳಿದಂತೆ ಎಂದರೆ ರಾಶಿಬಲದವನೂ ಸ್ಥಾನಬಲದವನೂ ಇದ್ದರೆ ಮಾತ್ರ ೧ ಗುಣ. ಕೇವಲ ಸ್ಥಾನಬಲದವನೂ ಅಥವಾ ಕೇವಲ ರಾಶಿಬಲದವನಿದ್ದರೆ ½ ಗುಣ ಲಭಿಸುತ್ತದೆ. ಈ ಹಿಂದೆ ಹೇಳಿದಂತೆ ಅಂದರೆ ಯಾವ ಗ್ರಹವು ಅಷ್ಟಮೇಶವಾಗಿದೆಯೋ, ಯಾವ ಸ್ಥಾನದಲ್ಲಿರುವುದೋ ಆ ಸ್ಥಾನದ, ಆ ಗ್ರಹದ ಗುಣ ಧರ್ಮದಂತೆ ಮಾತ್ರ ಆಕಸ್ಮಿಕ ಧನಯೋಗ ಪ್ರಾಪ್ತಿ ಆಗುತ್ತದೆ. ಉದಾಹರಣೆಗೆ ಅಷ್ಟಮೇಶನಾದ ಗುರುವು ಪಂಚಮೇಶನೊಂದಿಗೆ ಲಾಭ ಸ್ಥಾನದಲ್ಲಿಯಾಗಲಿ, ಪಂಚಮ ಸ್ಥಾನದಲ್ಲಿಯಾಗಲಿ, ಭಾಗ್ಯದಲ್ಲಿಯಾಗಲೀ ಇದ್ದರೆ ಕಾಣಿಕೆಯಿಂದಾಗಲಿ, ಭಕ್ತರಿಂದಾಗಲಿ, ಮಠಾಧೀಶರಿಂದಾಗಲಿ, ಲೇಖನ, ಗ್ರಂಥಗಳಿಂದಾಗಲಿ ಧನಪ್ರಾಪ್ತಿ ಆಗುತ್ತದೆ. ಹೀಗೆ ವಿವಿಧ ಗ್ರಹಗಳ ವಿವಿಧ ಸ್ಥಾನಗಳ ಗುಣಧರ್ಮದಂತೆ ಅಷ್ಟಮೇಶನ ಆಕಸ್ಮಿಕ ಧನಯೋಗ ಪ್ರಾಪ್ತಿ ಆಗುತ್ತದೆ.

**೨) ಪಂಚಮ ಸ್ಥಾನ ಹಾಗೂ ಪಂಚಮೇಶನ ಬಲಾಬಲದ ವಿಷಯವಾಗಿ**

ಆಕಸ್ಮಿಕ ಧನಯೋಗದ ವಿಷಯವಾಗಿ ಅಷ್ಟಮಸ್ಥಾನದ ನಂತರ ಪಂಚಮ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಹೇಗೆ ಕುಟುಂಬ ಸ್ಥಾನದ ಧನಸ್ಥಾನವು ಅಷ್ಟಮವಿರುವುದೋ ಹಾಗೆ ಸುಖಸ್ಥಾನದ ಧನಸ್ಥಾನವು ಪಂಚಮ ಸ್ಥಾನವಿರುತ್ತದೆ. ಅಲ್ಲದೇ ಪಂಚಮಸ್ಥಾನವಿದು

ಮನುಷ್ಯನ ಭಾವನಾಕಾರಕ ಸ್ಥಾನವು. ಇಂದು ಮನಸ್ಸಿನಲ್ಲಿ ಬಂದಿತು, ತಿಕೀಟನ್ನು ಕೊಂಡು, ರೇಸನ್ನು ಆಡಿದೆವು. ಹೀಗೆ ಆದುದರಿಂದ ಪಂಚಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ, ಆಕಸ್ಮಿಕ ಧನಯೋಗ ಪ್ರಾಪ್ತಿ ಆಗುತ್ತದೆ ಆದಕ್ಕಾಗಿ ೧ ಗುಣ ಲಭಿಸುತ್ತದೆ. ಬಲಾಢ್ಯನೆಂದರೆ, ರಾಶಿಬಲದವನೂ ಸ್ಥಾನಬಲದವನೂ ಇದ್ದರೆ ೧ ಗುಣ. ಕೇವಲ ರಾಶೀಬಲದವ ಅಥವಾ ಕೇವಲ ಸ್ಥಾನಬಲದವನಿದ್ದರೆ ½ ಗುಣ ಲಭಿಸುತ್ತದೆ. ಇದಂ ಅಲ್ಲದೇ ಪಂಚಮ ಸ್ಥಾನದಲ್ಲಿರುವ ಗ್ರಹದ ಗುಣಧರ್ಮದಂತೆ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ. ಉದಾ– ರವಿಯು ಬಲಾಢ್ಯನಾಗಿ ಪಂಚಮದಲ್ಲಿದ್ದರೆ ಸರಕಾರ ದಿಂದಲೂ, ವಿದೇಶಗಳಿಂದಲೂ ಧನಲಾಭವಾಗುತ್ತದೆ. ಹೀಗೆ ಆಯಾ ಗ್ರಹಗಳ ಗುಣಧರ್ಮದಂತೆ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ.

ಪಂಚಮೇಶನು ಬಲಾಢ್ಯನಾಗಿದ್ದರೆ ೧ ಗುಣ ಲಭಿಸುತ್ತದೆ. ಬಲಾಢ್ಯ ನೆಂದರೆ ರಾಶಿಬಲದವ, ಸ್ಥಾನಬಲದವ, ಕೇವಲ ರಾಶಿಬಲದವ ಅಥವಾ ಕೇವಲ ಸ್ಥಾನಬಲದವನಿದ್ದರೆ ½ ಗುಣವಮಾತ್ರ ಲಭಿಸುತ್ತದೆ. ಇದಲ್ಲದೆ ಪಂಚಮೇಶನು ಯಾವ ಸ್ಥಾನದಲ್ಲಿರುವನೋ ಆ ಸ್ಥಾನದ ಗುಣಧರ್ಮದಂತೆ ಆಕಸ್ಮಿಕ ಧನಯೋಗ ಪ್ರಾಪ್ತಿ ಆಗುತ್ತದೆ. ಉದಾಹರಣೆಗೆ ಪಂಚಮೇಶ ನಾದ ರವಿಯು ಭಾಗ್ಯದಲ್ಲಿದ್ದರೆ, ವಿದೇಶಗಳಿಂದಾಗಲೀ, ವಿದೇಶ ವ್ಯಕ್ತಿ ಗಳಿಂದಾಗಲೀ ಬೇರೆ ಪ್ರಾಂತಗಳಿಂದಾಗಲೀ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ. ಅಲ್ಲದೆ ಸರಕಾರದಿಂದಲೂ, ರಾಜಕೀಯ ವ್ಯಕ್ತಿಗಳಿಂದಲೂ ಧನಪ್ರಾಪ್ತಿ ಆಗುತ್ತದೆ. ಹೀಗೆ ವಿಭಿನ್ನ ಗ್ರಹಗಳ ವಿಭಿನ್ನ ಸ್ಥಾನಗಳ ಗುಣಧರ್ಮದಂತೆ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ.

**೩) ಆಕಸ್ಮಿಕ ಧನಯೋಗದ ಯೋಗಗಳು :**

೧) ತುಲಾರಾಶಿಯು ಪಂಚಮದಲ್ಲಿ ಶುಕ್ರ, ಶನಿಯರ ಯೋಗವಿದ್ದರೆ ಎಲ್ಲ ಪ್ರಕಾರದ ಎಣ್ಣೆ, ಕಟ್ಟಿಗೆ, ಕಬ್ಬಿಣ ಮೊದಲಾದವುಗಳಿಂದ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ.

೨) ಮಿಥುನ ಲಗ್ನದ ಭಾಗ್ಯದಲ್ಲಿ ಶನಿ, ಬುಧರಿದ್ದರೆ ಪ್ರಕಾಶಕ ವೃತ್ತಿಯಿಂದಾಗಲೀ, ಲೇಖಿನ ವೃತ್ತಿಯಿಂದಾಗಲೀ, ವ್ಯಾಪಾರದಿಂದಾಗಲೀ ಆಕಸ್ಮಿಕ ಧನಪ್ರಾಪ್ತಿಯಾಗುತ್ತದೆ.

3) ಮಿಥುನ ರಾಶಿಯಂ ರಾಹು, ಬುಧರ ಯೋಗವು ಇಲ್ಲವೆ ಕನ್ಯಾ ರಾಶಿಯ ರಾಹು, ಬುಧರ ಯೋಗವು ಅಷ್ಟಮದಲ್ಲಿದ್ದರೆ ಗುತ್ತಿಗೆ ವ್ಯವಹಾರ ದಿಂದ ಲಾಭವಾಗುತ್ತದೆ.

೪) ಕರ್ಕರಾಶಿಯಂ ಗುರು, ಚಂದ್ರರ ಯೋಗವು ಭಾಗ್ಯದಲ್ಲಿದ್ದರೆ ತಾಯಿಯ ಕಡೆಯಿಂದ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆ.

ಹೀಗೆ ಮೇಲೆ ಬರೆದ ಯೋಗಗಳಿದ್ದರ ೧ ಗುಣ ಲಭಿಸುತ್ತದೆ. ಮಾದರಿಗಾಗಿ ಮಾತ್ರ ಇಲ್ಲಿ ನಾಲ್ಕು ಯೋಗಗಳ ಉಲ್ಲೇಖ ಮಾಡಲಾಗಿದೆ. ಹೆಚ್ಚಿನ ವಿವರವನ್ನು ನಮ್ಮ "ಆಕಸ್ಮಿಕ **ಧನಯೋಗ ಗ್ರಂಥ**" ದಲ್ಲಿ ಕೊಡಲಾಗಿದೆ.



# ೫

# ಶಿಕ್ಷಣ

## ಗುಣಗಳು ೮

"ಕುಂಡಲಿ ಗುಣ ನಿರ್ಣಯ"ದಲ್ಲಿ ಜಾತಕನ ಶಿಕ್ಷಣವೂ ಒಂದು ಮಹತ್ವದ ಅಂಶವು. ಹಿಂದಿನ ಕಾಲದಲ್ಲಿ ವಿದ್ಯಾರ್ಥಿಗಳು ಗುರುಕುಲ ಪದ್ಧತಿಯಿಂದ ಶಿಕ್ಷಣ ಪಡೆಯುತ್ತಿದ್ದರು. ಹಾಗೂ ಅಂದಿನ ಶಿಕ್ಷಣಗಳ ವಿಷಯವೇ ಬೇರೆ ಇದ್ದವು. ಅಶ್ವವಿದ್ಯೆ, ಧನುರ್ವಿದ್ಯೆ, ವೇದವಿದ್ಯೆ ಇವೇ ಮೊದಲಾದವುಗಳು. ಆದರೆ ಇಂದು ಕಾಲ ಬದಲಾಗಿದೆ. ಶಿಕ್ಷಣ ಕ್ಷೇತ್ರಗಳಲ್ಲಿ ಆಮೂಲಾಗ್ರ ಬದಲಾವಣೆಯಾಗಿದೆ. ಕಲಿಯುವ ವಿಷಯಗಳಲ್ಲಿಯೂ ಕಲಿಸುವ ರೀತಿಯಲ್ಲಿಯೂ ಮಾರ್ಪಾಡಾಗಿದೆ. ಗುರುಕುಲ ಪದ್ಧತಿ ನಶಿಸಹತ್ತಿದೆ ಕೇವಲ ನೃತ್ಯ, ವಾದ್ಯ, ಸಂಗೀತದಲ್ಲಿಯ ಕೆಲ ಘರಾಣೆಯ ಗಾಯಕ ಗುರುಗಳು ಕೆಲ ಆಯ್ದ ವಿದ್ಯಾರ್ಥಿಗಳಿಗೆ ಮಾತ್ರ ಗುರುಕುಲ ಪದ್ಧತಿಯಂತೆ ಕಲಿಸುವರು. ಅಲ್ಲದೆ ತರ್ಕ, ನ್ಯಾಯ, ಮೀಮಾಂಸೆ, ವೇದ, ಆಗಮ ಮೊದಲಾದ ಭಾರತದ ಪ್ರಾಚೀನತೆಯನ್ನು ಉಳಿಸಿಕೊಂಡು ಬಂದ ವೇದಾಧ್ಯಯನದ ವೈದಿಕ ಶಿಕ್ಷಣವನ್ನು ಬಳಸಿಕೊಂಡು ಬಂದ ಕೆಲಗುರುಗಳೂ ಕೂಡ ಗುರುಕುಲ ಪದ್ಧತಿಯಂತೆ ಶಿಕ್ಷಣ ಕೊಡುವರು. ಆದರೆ ಆ ವರ್ಗ ಬೆರಳಿನಲ್ಲಿ ಎಣಿಸುವಷ್ಟು ಕಡಿಮೆ ಸಂಖ್ಯೆಯಲ್ಲಿದೆ. ಆದುದರಿಂದ ಈಗ ಶಿಕ್ಷಣಕ್ಕೆ ಬೇರೆ ಬೇರೆ ಅರ್ಥವಿವರಣೆ ಮಾಡಬೇಕಾಗಿದೆ.

ಸಾಮಾನ್ಯವಾಗಿ ಶಾಲೆ ಕಾಲೇಜುಗಳಲ್ಲಿ, ವಿಶ್ವವಿದ್ಯಾಲಯ. ತರಬೇತಿ ಸಂಸ್ಥೆ ಇವುಗಳಲ್ಲಿ ಅಧ್ಯಯನ ಮಾಡಿ ಪಡೆಯುವ ಪದವಿ ಪ್ರಮಾಣ ಪತ್ರ

ಎಂದೂ ಅರ್ಥವಿದೆ. ಆದರೆ ಈ ರೀತಿ ಸಾಮಾನ್ಯ ಶಿಕ್ಷಣವನ್ನು ಪಡೆದವನು ನಿಜಜೀವನದಲ್ಲಿ ಅಪಯಶಸ್ವಿಯೂ ಆಗಬಹುದು. ಆದುದರಿಂದ ಶಿಕ್ಷಣದ ಅರ್ಥ ವಿವರಣೆ ಮಾಡುವಾಗ ಒಂದೆಡೆ ಸಾಮಾನ್ಯ ಶಿಕ್ಷಣ ಪಡೆಯುವ ಬಗೆ (ಫಾರ್ಮಲ್ ಎಜ್ಯುಕೇಶನ್) ಒಂದೆಡೆ, ಇನ್ನೊಂದೆಡೆ ಜಾತಕನ ಬುದ್ಧಿಮತ್ತೆ ಹಾಗೂ ವ್ಯವಹಾರಿಕ ಬುದ್ಧಿ ಇವುಗಳ ಬಗೆಗೂ ಪರಾಮರ್ಶಿಸಬೇಕು. ಅತೀ ಹೆಚ್ಚು ಪದವಿಗಳನ್ನು ಪಡೆದ ಜಾತಕನು ವ್ಯವಹಾರಿಕ ಜ್ಞಾನವಿಲ್ಲದೆ ಜೀವನ ದಲ್ಲಿ ಹಣಗಳಿಸುವ ದೃಷ್ಟಿಯಿಂದ ಅವನು ಅಪಯಶಸ್ವಿಯಾಗಲೂಬಹುದು. ಅಂತೆಯೇ ಶಾಲೆ, ಕಾಲೇಜುಗಳ ಕಟ್ಟೆಯನ್ನೇ ಹತ್ತದವ ತನ್ನ ವ್ಯಾವಹಾರಿಕ ಜ್ಞಾನದ ಪರಿಪಕ್ವತೆಯಿಂದ ನಿಜ ಜೀವನದಲ್ಲಿ ಯಶಸ್ವಿಯೂ ಆಗಬಹುದು. ಇದು ಅಲ್ಲದೆ ಶಿಕ್ಷಣದ ಬಗೆಗೆ ವಿವೇಚಿಸುವಾಗ ಕೂಡ ಜಾತಕನಿಗೆ ಕೌಟುಂಬಿಕ ಶಿಕ್ಷಣದಲ್ಲಿಯೂ ಅವನ ಸುಸಂಸ್ಕೃತ ಪ್ರವೃತ್ತಿಯ ನಿರ್ಧಾರವಾಗುತ್ತದೆ. ಈ ಅಂಶ ಬಹಳೇ ಮಹತ್ವದ್ದು. ಆದುದರಿಂದ "**ಕುಂಡಲಿ ಗುಣ ನಿರ್ಣಯ**"ದಲ್ಲಿ ಯಾರೊಬ್ಬ ಜಾತಕನ ಶಿಕ್ಷಣ ದೃಷ್ಟಿಯಿಂದ ಗುಣ ಮಾಪನ ಹೇಗೆ ಮಾಡಬೇಕು ಎಂಬುದನ್ನು ಪರಿಶೀಲಿಸುವಾ.

ಯಾರೊಬ್ಬರ ಶಿಕ್ಷಣದ ವಿಷಯವಾಗಿ ತಿಳಿದುಕೊಳ್ಳಲು ಅರ್ಥಾತ್ ಇಂದಿನ ಶಿಕ್ಷಣ ಪದ್ಧತಿಯಂತೆ ತಿಳಿದುಕೊಳ್ಳಲು ಜಾತಕದಲ್ಲಿಯ ಅನೇಕ ಗ್ರಹ ಗಳನ್ನು ಅನೇಕ ಸ್ಥಾನಗಳ ಬಲಾಬಲವನ್ನು ಪರಿಶೀಲಿಸಬೇಕು.

ಯಾರೊಬ್ಬ ವಿದ್ಯಾರ್ಥಿಯ ಶಿಕ್ಷಣ, ವಿದ್ಯಾ ಪೂರ್ತಿಯಾಗಲು ಜಾತಕ ದಲ್ಲಿ ಗುರು ಬಲಾಢ್ಯನಿರಲೇಬೇಕು. ಏಕೆಂದರೆ ಗುರುವು ವಿದ್ಯೆಯ ಜ್ಞಾನದ ಅಧಿಪತಿಯು. ಗುರುವು ಬಲಾಢ್ಯನಿದ್ದರೆ ಜಾತಕನು ತೀಕ್ಷ್ಣಮತಿಯೂ, ಕುಶಾಗ್ರಮತಿಯೂ ಇದ್ದು, ಜ್ಞಾನವಂತನಿರುತ್ತಾನೆ. ಆದರೆ ವಿದ್ಯಾವಂತ ನಿರುತ್ತಾನೆ ಎಂದು ಹೇಳಲುಬಾರದು. ವಿದ್ಯಾ, ಬುದ್ಧಿ, ಜ್ಞಾನ ಇವುಗಳಿಗೆ ವಿಶಿಷ್ಟ ಅರ್ಥವಿರುತ್ತದೆ. ಜ್ಞಾನವಂತನು ಬೇರೆ, ವಿದ್ಯಾವಂತನು ಬೇರೆ. ಜ್ಞಾನ ವಂತನು ವಿದ್ಯಾವಂತನಿರಬಹುದು, ಇರಲಿಕ್ಕಿಲ್ಲ. ಇದರಂತೆ ವಿದ್ಯಾವಂತನು ಜ್ಞಾನವಂತನು ಇರಬಹುದು, ಇರಲಿಕ್ಕಿಲ್ಲ. ಜಾತಕದಲ್ಲಿ ಗುರು ಬಲಾಢ್ಯ

ನಿದ್ದರೆ ಜಾತಕನು ಜ್ಞಾನವಂತ ಖಂಡಿತವಾಗಿರುತ್ತಾನೆ. ಆದರೆ ವಿದ್ಯಾವಂತ ನಾಗಲು ಆಧುನಿಕ ಶಿಕ್ಷಣ ಪದ್ಧತಿಯ ಅನೇಕ ಸಂಗತಿಗಳನ್ನು ಪರಿಶೀಲಿಸ ಬೇಕಾಗುತ್ತದೆ. ಆದುದರಿಂದ ಅನೇಕ ಗ್ರಹಗಳ ಬಲಾಬಲವನ್ನು ಪರಿ ಶೀಲಿಸಬೇಕಾಗುತ್ತದೆ. ಉದಾಹರಣೆಗೆ ರವಿಯು ಬಲಾಢ್ಯನಿದ್ದರೆ ಆ ಜಾತಕನಿಗೆ ತಕ್ಕ ಅವಕಾಶ, ಸೌಲಭ್ಯ, ಸುಸಂಧಿ ಸಕಾಲದಲ್ಲಿ ದೊರೆತು, ತಾನು ತೆಗೆದುಕೊಂಡ ವಿಷಯ ಹಾಗೂ ಕೋರ್ಸುಗಳನ್ನು ಪೂರ್ತಿಗೊಳಿಸು ತ್ತಾನೆ. ಅಲ್ಲದೇ ಆಧುನಿಕ ಶಿಕ್ಷಣ ಪದ್ಧತಿಯಂತೆ ವಿಭಿನ್ನ ಶೈಕ್ಷಣಿಕ ವಿಷಯ ಗಳನ್ನು ಅಭ್ಯಸಿಸಬೇಕಾಗುತ್ತದೆ ವಿಭಿನ್ನ ಶೈಕ್ಷಣಿಕ ವಿಷಯಗಳಿಗೆ ವಿಭಿನ್ನ ಕೋರ್ಸುಗಳಿಗೆ ವಿಭಿನ್ನ ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ ಅರ್ಥಶಾಸ್ತ್ರ, ವಾಣಿಜ್ಯಶಾಸ್ತ್ರ, ಭಾಷಾವಿಷಯ ಇವೇ ಮೊದಲಾದ ವಿಷಯ ಗಳಿಗೂ ವಾಣಿಜ್ಯ ಕೋರ್ಸುಗಳಿಗೂ ಬುಧನು ಕಾರಕ ಗ್ರಹವು. ಭೌತಶಾಸ್ತ್ರ ವಿಜ್ಞಾನ, ತಂತ್ರಜ್ಞಾನ, ಇಂಜನೀಯರಿಂಗ ಹಾಗೂ ಟೆಕ್ನಿಕಲ್ ಕೋರ್ಸು ಗಳಿಗೆಲ್ಲ ಮಂಗಳನು ಕಾರಕನು. ಸಂಗೀತ, ನೃತ್ಯ, ಬಣ್ಣದ ಕಲೆ, ಚಿತ್ರಕಲೆ ಇವೇ ಮೊದಲಾದ ಲಲಿತ ಕಲೆಗಳಿಗೆ ಶುಕ್ರನು ಕಾರಕನು. ಕೃಷಿ ವಿಜ್ಞಾನ, ಪಶು ವಿಜ್ಞಾನ, ಕಾಯದೆ ಈ ಎಲ್ಲ ವಿಷಯದ ಕೋರ್ಸುಗಳಿಗೆಲ್ಲ ಶನಿಯು ಕಾರಕನು. ಹೀಗೆ ವಿಭಿನ್ನ ವಿಷಯಗಳಿಗೆ ವಿಭಿನ್ನ ಗ್ರಹಗಳು ಕಾರಕವೂ ಪೋಷಕವೂ ಇರುತ್ತವೆ.

ಯಾರೊಬ್ಬ ಜಾತಕನ ಶಿಕ್ಷಣದ ಅರ್ಥಾತ್ ವಿದ್ಯಾಬುದ್ಧಿಗಳಿಗೆಲ್ಲ ಪಂಚಮ ಸ್ಥಾನವೇ ಕಾರಕವು. ಆದರೆ ಇಂದಿನ ಶಿಕ್ಷಣ ಪದ್ಧತಿಗೆ ಪರೀಕ್ಷಾ ವಿಧಾನಗಳಿಗೆಲ್ಲ ಕೇವಲ ಪಂಚಮಸ್ಥಾನ ಪರಿಶೀಲಿಸದೆ ಅನೇಕ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಕೆಲವು ಕೋರ್ಸು ಹಾಗೂ ವಿಷಯ ಗಳಲ್ಲಿ ಪುಸ್ತಕೀಯ ಶಿಕ್ಷಣಕ್ಕಿಂತ, ಪಾಠ ಪ್ರವಚನಕ್ಕಿಂತ ಪ್ರಯೋಗ ಶಾಲೆ ಯಲ್ಲಿಯ ಪ್ರಾತ್ಯಕ್ಷೀಯ ಜ್ಞಾನವನ್ನು ಪಡೆಯಬೇಕಾಗುತ್ತದೆ, ಈ ಪ್ರಾತ್ಯ ಕ್ಷಿಕೀಯ ಪರೀಕ್ಷೆಗೆ ತೃತೀಯ ಸ್ಥಾನವೇ ಕಾರಕವು. ಅಲ್ಲದೇ ತಾಂತ್ರಿಕ ಡಿಪ್ಲೋಮಾ ಹಾಗೂ ಅಲ್ಪಾವಧಿಯ ಕೋರ್ಸುಗಳಿಗೆಲ್ಲ ತೃತೀಯ ಸ್ಥಾನವು. ಇದರಂತೆ ಪೋಲೀಸ ಮಿಲಿಟರಿ ಮೊದಲಾದ ಸೈನಿಕ ಶಿಕ್ಷಣದ ದೇಹ

ದಾರ್ಢ್ಯವು ಮಹತ್ವದ್ದು. ಆದಕ್ಕಾಗಿ ಜಾತಕನ ತನುಸ್ಥಾನವನ್ನು ಪರಿಶೀಲಿಸ ಬೇಕಾಗುತ್ತದೆ.

ಪರೀಕ್ಷೆಗಳಲ್ಲಿಯೂ ಕೂಡ ಮೂರು ಪ್ರಕಾರಗಳಿವೆ. ೧) ಥೇರಿ, ೨) ಪ್ರಾತ್ಯಕ್ಷಿಕೆ, ೩) ಮೌಖಿಕ ಈ ಮೂರು ಪ್ರಕಾರದ ಪರೀಕ್ಷೆಗಳಿಗೂ ವಿಭಿನ್ನ ಗ್ರಹಗಳೂ ವಿಭಿನ್ನ ಸ್ಥಾನಗಳೂ ಕಾರಕವು. ಥೇರಿ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಪಂಚಮಸ್ಥಾನ ಹಾಗೂ ಗುರು ಗ್ರಹಕಾರಕವಿದ್ದರೆ ಪ್ರಾತ್ಯಕ್ಷಿಕೆ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಮಂಗಳ, ರವಿ, ಶನಿಯರು ಹಾಗೂ ತೃತೀಯ ಸ್ಥಾನ ಕಾರಕವು. ಮೌಖಿಕ ಪರೀಕ್ಷೆಯಲ್ಲಿ ತೇರ್ಗಡೆ ಯಾಗಲು ಚಂದ್ರ, ಶುಕ್ರ ಗ್ರಹ ಹಾಗೂ ದ್ವಿತೀಯ ಸ್ಥಾನವೂ ಕಾರಕವು. ಅಲ್ಲದೇ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ತೇರ್ಗಡೆಯಾಗುವ ಗ್ರಹ, ಸ್ಥಾನಗಳು ಬೇರೆ ಇರುತ್ತವೆ. ಹೀಗೆ ಯಾರೊಬ್ಬರ ಶಿಕ್ಷಣದ ಬಗೆಗೆ ತಿಳಿದುಕೊಳ್ಳಲು ಅನೇಕ ಗ್ರಹಗಳ ಹಾಗೂ ಅನೇಕ ಸ್ಥಾನಗಳ ಬಲಾಬಲವನ್ನು ಪರಿಶೀಲಿಸ ಬೇಕಾಗುತ್ತದೆ. ಯಾವ ಯಾವ ವಿಷಯಗಳಿಗೆ, ಯಾವ ಯಾವ ಕೋರ್ಸ್ ಗಳಿಗೆ ಯಾವ ಯಾವ ಪರೀಕ್ಷೆಗಳಿಗೆ ಯಾವ ಗ್ರಹಗಳು, ಯಾವ ಸ್ಥಾನಗಳು ಕಾರಕವಿರುತ್ತವೆ ಎಂಬುದರ ಸುದೀರ್ಘ ವಿವರಣೆಯನ್ನು ನಾವು ಬರೆದು ಪ್ರಕಟಿಸಿದ "**ಶಿಕ್ಷಣ ಜ್ಯೋತಿಷ್ಯ**" **ಎಂಬ ಗ್ರಂಥದಲ್ಲಿ ವಿವರವಿವರವಾಗಿ ವಿವೇಚಿಸಿದೆ.** ಪ್ರಸ್ತುತ ಈ ಗ್ರಂಥದ ಈ ವಿಷಯಕ್ಕೆ ಸಂಬಂಧಿಸಿದ ವಿಷ ಯದ ರೂಪರೇಷೆಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಿದೆ.

ವಿಭಿನ್ನ ಸ್ಥಾನಗಳ ಮೇಲಿಂದಲೂ, ವಿಭಿನ್ನ ಗ್ರಹಗಳ ಮೇಲಿಂದಲೂ ವಿವಿಧ ಪ್ರಕಾರದ ಕೋರ್ಸ್‌ಗಳ ವಿಷಯ ಶಿಕ್ಷಣದ ಬಗ್ಗೆ ವಿವರಿಸಿದ್ದರೂ, ಯಾರೊಬ್ಬರ ಶಿಕ್ಷಣದ ವಿಷಯವಾಗಿ ನಾಲ್ಕು ಸಂಗತಿಗಳನ್ನು ಮಾತ್ರ ಪರಿ ಶೀಲಿಸಬೇಕಾಗುತ್ತದೆ. ೧) ಗುರುವಿನ ಬಲಾಬಲ, ೨) ಬುಧನ ಬಲಾಬಲ, ೩) ಪಂಚಮಸ್ಥಾನ ಹಾಗೂ ಪಂಚಮೇಶನ ಬಲ, ೪) ತೃತೀಯ ಸ್ಥಾನ ಹಾಗೂ ತೃತಿಯೇಶನ ಬಲ. ಈ ನಾಲ್ಕೂ ಸಂಗತಿಗಳು ಪೂರಕವಿದ್ದರೆ ೮ ಗುಣಗಳಿಗೆ ೮ ಗುಣಗಳು ಲಭಿಸುತ್ತವೆ. ಈ ನಾಲ್ಕು ಸಂಗತಿಗಳು ಪ್ರತಿ

ಕೂಲವಿದ್ದರೆ ಶೂನ್ಯಗುಣ ಬರುತ್ತವೆ. ಅವುಗಳಲ್ಲಿ ೧-೨ ಸಂಗತಿಗಳು ಮಾತ್ರ ಪೂರಕವಿದ್ದರೆ ಅಷ್ಟು ಗುಣ ಕಡಿಮೆ ಬರುತ್ತವೆ. ಅವುಗಳ ವಿವರಣೆ ಹೀಗಿದೆ :

## ೧) ಗುರುವಿನ ಮೇಲಿಂದ

ಹೇಗೆ ಮಾತೃಸೌಖ್ಯಕ್ಕೆ ಚಂದ್ರನೂ, ಸರ್ವಥಾ ಆರೋಗ್ಯಕ್ಕೆ ಸೂರ್ಯನೂ ಪತಿ-ಪತ್ನೀ ಸೌಖ್ಯಕ್ಕೆ ಶುಕ್ರನು ಕಾರಕನೂ, ಪೋಷಕನೂ ಇರುವನೋ ಹಾಗೆ, ಶಿಕ್ಷಣ ವಿದ್ಯಾ ಜ್ಞಾನಕ್ಕೆ ಗುರುವೆ ಕಾರಕನು, ಪೋಷಕನು ಇರುತ್ತಾನೆ. ವಿದ್ಯಾಜ್ಞಾನದ ಅಧಿಪತಿಯೇ ಗುರುವು. ಗುರುವಿನ ಗುರುತ್ವ ವಿರದೇ ಯಾರಿಗೂ ಶಿಕ್ಷಣ, ವಿದ್ಯಾಜ್ಞಾನ ಲಭಿಸದು.

ಗುರುವಿಗೆ ಇನ್ನೊಂದು ಹೆಸರು ಬೃಹಸ್ಪತಿ ಎನ್ನುತ್ತಾರೆ. ಬೃಹಸ್ಪತಿ ಎಂದರೆ ಮೇಧಾವಿ, ಸಕಲ ಶಾಸ್ತ್ರಗಳಲ್ಲಿ ನಿಷ್ಣಾತ ಪಾಂಡಿತ್ಯ ಪಡೆದವ. ಅನೇಕ ವಿಷಯಗಳನ್ನು ತಿಳಿದುಕೊಂಡವ. ತರ್ಕ, ಧರ್ಮ, ನ್ಯಾಯ, ಮೀಮಾಂಸೆ,ವೇದ,ಆಗಮ ಮೊದಲಾದ ಎಲ್ಲ ವಿಷಯಗಳಲ್ಲಿಯೂ ಪ್ರವೀಣನಿರುವನು. ಒಂದೇ ಶಬ್ದದಲ್ಲಿ ಹೇಳಬೇಕೆಂದರೆ "ಜ್ಞಾನಿ" ಎಂದು. ವಿವೇಕ ಬುದ್ಧಿ, ನೀತಿಕಾರಕ, ತತ್ವನಿಷ್ಠ, ನ್ಯಾಯ ನಿಷ್ಠುರ ಸಿದ್ಧಾಂತಗಳಲ್ಲಿ ಸಂಬಂಗೆ ಉಳ್ಳವ ಇವೇ ಮೊದಲಾದ ಗುಣ ಧರ್ಮವು ಗುರುವಿನಲ್ಲಿರುತ್ತವೆ. ಆದುದರಿಂದ ಜಾತಕದಲ್ಲಿ ಬಲಾಢ್ಯ ಗುರುವಿದ್ದರೆ, ತೆಗೆದುಕೊಂಡ ಯಾವುದೇ ಕೋರ್ಸ್, ವಿಷಯಗಳಿದ್ದರೂ ಶಿಕ್ಷಣ ಪೂರ್ತಿಯಾಗುತ್ತದೆ. ತೆಗೆದುಕೊಂಡ ಕೋರ್ಸ್ ವಿಷಯಗಳಲ್ಲಿಯೂ ಪಾಂಡಿತ್ಯ ಪಡೆಯುತ್ತಾನೆ. ಬಲಾಢ್ಯಗುರುವೆಂದರೆ ರಾಶಿಬಲದವನೂ, ಸ್ಥಾನಬಲದವನೂ ಇದ್ದರೆ ೨ ಗುಣಗಳಿಗೆ ೨ ಗುಣಗಳು ಲಭಿಸುವವು. ಗುರುವು ನಿರ್ಬಲನಿದ್ದರೆ, ದುರ್ಬಲನಿದ್ದರೆ ಶೂನ್ಯಗುಣ ಲಭಿಸುತ್ತದೆ. ಬಲಾಢ್ಯ ಗುರುವು ಲಗ್ನ, ಪಂಚಮ, ನವಮ, ತೃತೀಯ, ಲಾಭ ಈ ಸ್ಥಾನಗಳಲ್ಲಿದ್ದರೂ ಶಿಕ್ಷಣ ಪೂರ್ತಿಯಾಗುತ್ತದೆ. ಅಷ್ಟೇ ಏಕೆ, ಬಲಾಢ್ಯ ಗುರುವಿನ ಶುಭದೃಷ್ಟಿಯು ಪಂಚಮಸ್ಥಾನದ ಮೇಲೆ ಪಂಚಮೇಶನ ಮೇಲೆ ತೃತೀಯ ಸ್ಥಾನದ ಮೇಲೆ ತೃತೀಯೇಶನ ಮೇಲೆ ಬುಧನ

ಮೇಲೆ ಇದ್ದರೂ ಕೂಡ ಶಿಕ್ಷಣ ಪೂರ್ತಿಯಾಗುತ್ತದೆ. ಆದುದರಿಂದ ೨ ಗುಣಗಳಿಗೆ ೨ ಗುಣಗಳು ಲಭಿಸುತ್ತವೆ. ಆದರೆ ಗುರುವು ಕೇವಲ ರಾಶಿ ಬಲದವನಿದ್ದರೆ ೧ ಗುಣವು. ಕೇವಲ ಸ್ಥಾನಬಲದವನಿದ್ದರೂ ಕೂಡ ೧ ಗುಣವು ಲಭಿಸುತ್ತದೆ. ಹೇಗೆ ಗುರುವಿನ ಬಲಾಬಲದ ಮೇಲೆ ಶಿಕ್ಷಣ ವಿಷಯದ ಗುಣಮಾಪನ ಮಾಡಬೇಕು.

೨) ಬುಧನ ಮೇಲಿಂದ :

ಯಾರೊಬ್ಬರ ಶಿಕ್ಷಣ, ವಿದ್ಯಾಬುದ್ಧಿ, ಜ್ಞಾನ ಪಾಂಡಿತ್ಯದ ಬಗೆಗೆ ವಿಚಾರಿಸುವಾಗ ಗುರುವಿನ ಬಲಾಬಲದ ನಂತರ ಬುಧನ ಬಲಾಬಲವನ್ನು ಜಾತಕದಲ್ಲಿ ಪರಿಶೀಲಿಸಬೇಕು. ಏಕೆಂದರೆ ಗುರುವು ವಿದ್ಯಾಕಾರಕನಿದ್ದರೆ, ಬುಧನು ಬುದ್ಧಿಕಾರಕನು. ಜ್ಞಾನದ ಆಳ, ಎತ್ತರಕ್ಕೆ ಗುರುವು ಕಾರಕನಿದ್ದರೆ, ಜ್ಞಾನದ ಹರವಿಗೆ ಬುಧನು ಕಾರಕನು. ಯಾವುದೊಂದು ವಿಷಯದ ಭಾಷೆಯ ಪ್ರಭುತ್ವ ಪಡೆಯಲು ಗುರುವು ಕಾರಕ ಅರ್ಥಾತ್ ಗುರುವು ಬಲಾಢ್ಯನಿರುತ್ತಾನೆ. ಆದರೆ ಅನೇಕ ವಿಷಯಗಳ, ಅನೇಕ ಭಾಷೆಗಳ ಪ್ರಭುತ್ವವಿಲ್ಲದೇ ಇದ್ದರೂ, ತಿಳಿವಳಿಕೆ ಇದ್ದವ ಅನೇಕ ಭಾಷೆ ಬಲ್ಲವನಿರಲು ಬುಧನು ಕಾರಕನು. ಅರ್ಥಾತ್ ಬಲಾಢ್ಯನಿರುತ್ತಾನೆ. ಹೇಗೆ ಗುರುವು ಕಾರಕನಿದ್ದರೆ ಪ್ರಾತ್ಯಕ್ಷ ಹಾಗೂ ಮೌಖಿಕಗೆ ಬುಧನು ಕಾರಕನು. ಗುರುವು ಬಲಾಢ್ಯನಿದ್ದರೆ ತಾನು ನಂಬಿದ ತತ್ವ, ಸಿದ್ಧಾಂತಗಳಲ್ಲಿ ಅಚಲ ವಿಶ್ವಾಸವುಳ್ಳವನಿದ್ದರೆ, ಬುಧನು ಬಲಾಢ್ಯನಿದ್ದರೆ, ವ್ಯಾವಹಾರಿಕ ಭಾಷೆಯಲ್ಲಿ ವ್ಯವಹಾರ ಜ್ಞಾನದಲ್ಲಿ ಪಳಗಿದವನಿರುತ್ತಾನೆ. ಅಂತೆಯೇ ಪುಸ್ತಕ ಪಾಂಡಿತ್ಯ ಗುರುವಿನದಿದ್ದರೆ ವ್ಯವಹಾರ ಕುಶಲಗಾರಿಕೆ ಬುಧನದು. ಅಂತೆಯೇ ಗುರುವು ಬಲಾಢ್ಯನಿದ್ದರೆ ಜ್ಞಾನವಂತನೂ, ವಿದ್ವಾನನು. ಬುಧನು ಬಲಾಢ್ಯನಿದ್ದರೆ ಬುದ್ಧಿವಂತನು, ಬುದ್ಧಿವಾನನು. ಕೌಟುಂಬಿಕ ಶಿಕ್ಷಣ, ಕೌಟುಂಬಿಕ ಹಿನ್ನೆಲೆಗೆ ಗುರುವು ಕಾರಕನಿದ್ದರೆ ಪರಿಸರದ ಪ್ರಭಾವ ಹಾಗೂ ಸೃಜನಶೀಲತೆಗೆ ಬುಧನು ಕಾರಕನು. ವೃದ್ಧಾಪ್ಯರಿಗೆ, ಪ್ರೌಢರಿಗೆ ಮನೆಯ ಹಿರಿಯರ ಮೇಲೆ ಗುರುವಿನ ಪರಿಣಾಮವಾಗುತ್ತಿದ್ದರೆ, ಯುವ ಜನರ ಮೇಲೆ ಬುಧನ ಪರಿಣಾಮವಾಗುತ್ತದೆ. ಗುರುವು ಶಿಕ್ಷಕ, ನ್ಯಾಯಾಧೀಶ, ಮಠಾಧೀಶ

ಸ್ಥಾನಗಳಿಗೆ ಕಾರಕನಿದ್ದರೆ, ವ್ಯಾಪಾರ ವೃತ್ತಿಗೆ ಹಾಗೂ ಯಾರೊಬ್ಬರ ಇಲ್ಲವೇ ಯಾವುದೊಂದು ಸಂಸ್ಥೆಯ ಪ್ರತಿನಿಧಿಯಾಗಿ ಕೈಕೊಳ್ಳುವ ಕೆಲಸಕ್ಕೆ ಬುಧನು ಕಾರಕನು. ಗುರುವು ಗಂಭೀರ ಸ್ವಭಾವದ ಗುಣಧರ್ಮದ ಕಾರಕನಿದ್ದರೆ ಹಾಸ್ಯ ಪ್ರವೃತ್ತಿಗೆ ಬುಧನು ಕಾರಕನು. ಪಾಂಡಿತ್ಯಪೂರ್ಣ ಲೇಖನಕ್ಕೆ ಗುರುವು ಕಾರಕನಿದ್ದರೆ, ವೈವಿಧ್ಯಮಯ ಲೇಖನಕ್ಕೆ ಬುಧನು ಕಾರಕನು. ಅಂಕಗಣಿತಕ್ಕೆ ಗುರುವು ಕಾರಕನಿದ್ದರೆ, ರೇಖಾ ಗಣಿತಕ್ಕೆ ಬುಧನು ಕಾರಕನು. ಜಾತಕದ ಪಂಚಮ ಸ್ಥಾನಕ್ಕೆ ಗುರುವು ಕಾರಕನಿದ್ದರೆ, ತೃತೀಯ ಸ್ಥಾನಕ್ಕೆ ಬುಧನು ಕಾರಕನು. ಹೀಗೆ ಗುರು, ಬುಧರ ಗುಣಧರ್ಮವಿರುವುದರಿಂದ ಶಿಕ್ಷಣಕ್ಕೆ ಬುಧನ ಬಲಾಬಲವನ್ನು ಪರಿಶೀಲಿಸಬೇಕು. ಬುಧನು ಬಲಾಢ್ಯನಿದ್ದರೆ ೨ ಗುಣಗಳಿಗೆ ೨ ಗುಣಗಳು ಬರುತ್ತವೆ. ಬಲಾಢ್ಯನೆಂದರೆ ರಾಶಿಬಲದವನೂ ಸ್ಥಾನಬಲದವನೂ ಇರಬೇಕು. ಬುಧನು ನಿರ್ಬಲನೂ, ದುರ್ಬಲನೂ ಇದ್ದರೆ ಶೂನ್ಯಗುಣ ಲಭಿಸುತ್ತದೆ. ಆದರೆ ಬುಧನು ಕೇವಲ ರಾಶಿಬಲದವನಿದ್ದರೆ ೧ ಗುಣ. ಕೇವಲ ಸ್ಥಾನಬಲದವನಿದ್ದರೂ ೨ ಗುಣ ಲಭಿಸುತ್ತವೆ. ಹೀಗೆ ಬುಧನ ಬಲಾಬಲದ ಮೇಲಿಂದ ಶಿಕ್ಷಣದ ವಿಷಯವಾಗಿ ಗುಣಮಾಪನ ಮಾಡಬೇಕು.

### ೪) ಪಂಚಮ ಸ್ಥಾನದ ಮೇಲಿಂದ ;

ವಿದ್ಯೆ, ಬುದ್ಧಿ, ಜ್ಞಾನ ಈ ಎಲ್ಲ ಸಂಗತಿಗಳನ್ನು ಪಂಚಮ ಸ್ಥಾನದ ಮೇಲಿಂದ ಪರಿಶೀಲಿಸುತ್ತಾರೆ. ಆದುದರಿಂದ ಪಂಚಮ ಸ್ಥಾನವೇ ಶಿಕ್ಷಣದ ಸ್ಥಾನವು. ಅಲ್ಲದೆ ಇಂದಿನ ಶಿಕ್ಷಣ ಪದ್ಧತಿಯಲ್ಲಿ ಹಾಗೂ ಪರೀಕ್ಷೆಗಳಲ್ಲಿ ಪಂಚಮ ಸ್ಥಾನವಿದು ಘೇರಿಯ ಸ್ಥಾನವು. ಆದುದರಿಂದ ಪಂಚಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದು ಪಂಚಮೇಶನು ಬಲಾಢ್ಯನಿದ್ದರೆ ಇಂಥ ಜಾತಕನ ಶಿಕ್ಷಣಕ್ಕೆ ಯಾವ ಅಡಚಣೆ ಇರುವುದಿಲ್ಲವಾದುದರಿಂದ ೨ ಗುಣಗಳಿಗೆ ೨ ಗುಣಗಳು ಬರುತ್ತವೆ. ಇನ್ನು ಪಂಚಮ ಸ್ಥಾನದಲ್ಲಿ ದುರ್ಬಲ, ನಿರ್ಬಲ ಗ್ರಹ ಇಲ್ಲವೇ ಗ್ರಹಗಳಿದ್ದು, ಪಂಚಮೇಶನು ಬಲಾಢ್ಯನಿದ್ದರೆ ೧ ಗುಣ ಲಭಿಸುತ್ತದೆ. ಇದರಂತೆ ಪಂಚಮೇಶನು ದುರ್ಬಲನಿದ್ದು, ಪಂಚಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೂ ೧ ಗುಣ ಲಭಿಸುತ್ತದೆ. ಪಂಚಮ ಸ್ಥಾನದಲ್ಲಿ ದುರ್ಬಲ ಗ್ರಹ ಹಾಗೂ ಪಂಚಮೇಶನೂ ದುರ್ಬಲನಿದ್ದರೆ ಶೂನ್ಯ ಗುಣ ಲಭಿಸುತ್ತದೆ.

ಹೀಗೆ ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲದ ಮೇಲೆ ಶಿಕ್ಷಣ ವಿಷಯಕ್ಕೆ ಗುಣಮಾಪನ ಮಾಡಬೇಕು.

**೪) ತೃತೀಯ ಸ್ಥಾನದ ಮೇಲಿಂದ :**

ಪಂಚಮ ಸ್ಥಾನದ ನಂತರ ಶಿಕ್ಷಣಕ್ಕೆ ಅತೀ ಮುಖ್ಯಸ್ಥಾನವೆಂದರೆ ತೃತೀಯ ಸ್ಥಾನವು. ಏಕೆಂದರೆ ಇಂದಿನ ಶಿಕ್ಷಣ ಪದ್ಧತಿಯಲ್ಲಿ ಹಾಗೂ ಪರೀಕ್ಷೆಗಳಲ್ಲಿ ಥೇರಿ, ಪ್ರಾತ್ಯಕ್ಷಿಕೆ, ಮೌಖಿಕ ಹೀಗೆ ಮೂರೂ ಪ್ರಕಾರಗಳಿವೆ. ಥೇರಿಗೆ ಪಂಚಮಸ್ಥಾನ ಕಾರಕವಾದರೆ, ಪ್ರಾತ್ಯಕ್ಷಿತೆಗೆ ತೃತೀಯ ಸ್ಥಾನವು ಕಾರಕವು. ತೃತೀಯ ಸ್ಥಾನ ಹಾಗೂ ತೃತಿಯೇಶ ಬಲಾಢ್ಯರಿದ್ದರೆ ಪ್ರಾತ್ಯಕ್ಷಿಕೆಯ (ಪ್ರಯೋಗ ಶಾಲೆಯಲ್ಲಿ ನಡೆಯುವ ಪರೀಕ್ಷೆಗಳಲ್ಲಿ) ಪರೀಕ್ಷೆಯಲ್ಲಿ ಪ್ರವೀಣರಿರುತ್ತಾರೆ. ತಾಂತ್ರಿಕ ಶಿಕ್ಷಣ, ಇಂಜನಿಯರಿಂಗ ಶಿಕ್ಷಣ ಹಾಗೂ ಹಲವು ಡಿಪ್ಲೋಮಾ ಕೋರ್ಸುಗಳಲ್ಲಿ ಥೇರಿಗಿಂತ ಪ್ರಾತ್ಯಕ್ಷಿಕೆಯೇ ಹೆಚ್ಚಾಗಿರುತ್ತದೆ. ಇದು ಅಲ್ಲದೇ ತೃತೀಯ ಸ್ಥಾನವಿದು ಹಸ್ತಾಕ್ಷರ ಸ್ಥಾನವಿದ್ದು, ಪಂಚಮ ಸ್ಥಾನದಿಂದ ವಿಷಯ ನಿರೂಪಣೆಯ ಶೈಲಿ, ಪದ್ಧತಿ, ಬರಹದ ಒಕ್ಕಣಿಕೆ, ವ್ಯಕ್ತಪಡಿಸುವ ವಿಷಯದ ಜ್ಞಾನದ ಕಲ್ಪನೆ ಬರುತ್ತದೆ. ಆದರೆ ಅದನ್ನು ಬರೆಹದಲ್ಲಿ ಪ್ರಕಟಿಸಬೇಕಾದರೆ ಹಸ್ತಾಕ್ಷರವು ಮುಖ್ಯವಿರುತ್ತದೆ. ತೃತೀಯ ಸ್ಥಾನ ತೃತಿಯೇಶನು ಬಲಾಢ್ಯನಿದ್ದರೆ ಅವರ ಹಸ್ತಾಕ್ಷರ ಉತ್ತಮ ವಿರುತ್ತದೆ. ಅಕ್ಷರಗಳು ಮುದ್ದು ಮುದ್ದಾಗಿ ದುಂಡಗಾಗಿ ಓದಲು ಆಕರ್ಷಣೆ ಉಂಟಾಗುವ ಹಾಗೆ ಅಕ್ಷರವಿರುತ್ತದೆ. ಆದುದರಿಂದ ಯಾವ ಜಾತಕದಲ್ಲಿ ತೃತೀಯ ಸ್ಥಾನದಲ್ಲಿ ಬಲಾಢ್ಯ ಗ್ರಹ ಹಾಗೂ ತೃತಿಯೇಶ ಬಲಾಢ್ಯರಿದ್ದರೆ ೨ ಗುಣಗಳಿಗೆ ೨ ಗುಣಗಳು ಬರುತ್ತವೆ. ತೃತೀಯ ಸ್ಥಾನದಲ್ಲಿ ದುರ್ಬಲ ಗ್ರಹವಿದ್ದು ತೃತಿಯೇಶನು ದುರ್ಬಲನಿದ್ದರೆ ಶೂನ್ಯ ಗುಣಗಳು. ತೃತೀಯ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದು, ತೃತಿಯೇಶನು ದುರ್ಬಲನಿದ್ದರೆ ೧ ಗುಣ ಲಭಿಸುತ್ತದೆ. ಇದರಂತೆ ತೃತೀಯ ಸ್ಥಾನದಲ್ಲಿ ದುರ್ಬಲ ಗ್ರಹವಿದ್ದು ತೃತಿಯೇಶನು ಬಲಾಢ್ಯನಿದ್ದರೂ ೧ ಗುಣ. ಹೀಗೆ ತೃತೀಯ ಸ್ಥಾನದಲ್ಲಿಯ ಗ್ರಹ ಹಾಗೂ ತೃತಿಯೇಶನ ಬಲಾಬಲದ ಮೇಲೆ ಶಿಕ್ಷಣದ ವಿಷಯದ ಗುಣಮಾಪನ ಮಾಡಬೇಕು.



# ೬

# ಉದ್ಯೋಗ

## ಗುಣಗಳು ೮

ಉದ್ಯೋಗ ಮಾಡುವದೆಂದರೇನು ? ಉದ್ಯೋಗ ಏತಕ್ಕೆ ಮಾಡಬೇಕು ? ಉದ್ಯೋಗದ ಉದ್ದೇಶವೇನು ? ಮೊದಲಾದ ಹಲವಾರು ಪ್ರಶ್ನೆಗಳಿವೆ. ಉದ್ಯೋಗ ಕೆಲವರಿಗೆ ಕಾಲಕ್ಷೇಪವಾದರೆ, ಹಲವರಿಗೆ ಸಮಾಜ ಸೇವೆ. ಮತ್ತೆ ಕೆಲವರಿಗೆ ಕರ್ತವ್ಯ. ಆದರೆ ಅನೇಕರಿಗೆ ಜೀವನ ನಡೆಸಲು ಉದ್ಯೋಗ ಕೈಕೊಳ್ಳುವದು ಅನಿವಾರ್ಯವು. ಉದ್ಯೋಗದ ಉದ್ದೇಶ ಅನೇಕ ವಿದ್ದರೂ ಹಣಗಳಿಸುವುದೇ ಮುಖ್ಯವು. ಹಾಗಾದರೆ ಯಾವ ಉದ್ಯೋಗ ಕೈಕೊಳ್ಳಬೇಕು. ಏಕೆಂದರೆ ಉದ್ಯೋಗದಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳು– ೧) ನೌಕರಿ, ೨) ವೃತ್ತಿ. ವೃತ್ತಿ ಅಂದರೆ ಸ್ವತಂತ್ರ ಉದ್ಯೋಗವು. ನೌಕರಿಯಲ್ಲಿಯೂ ಕೂಡ ಅನೇಕ ಪ್ರಕಾರಗಳಿವೆ. ಸರಕಾರಿ ನೌಕರಿ, ಸರಕಾರಿ ನೌಕರಿಯಲ್ಲಿಯೂ ಕೂಡ ಎರಡು ಪ್ರಕಾರ. ರಾಜ್ಯ ಸರಕಾರದ್ದು, ಕೇಂದ್ರ ಸರಕಾರದ್ದು. ಅಲ್ಲದೆ ಸಾರ್ವಜನಿಕ ಕ್ಷೇತ್ರಗಳ. ಸ್ಥಾನಿಕ ಸಂಸ್ಥೆಗಳ. ಗಿರಣಿ, ಕಾರಖಾನೆಗಳ, ಬೋರ್ಡ, ನಿಗಮಗಳ, ಲಿಮಿಟೆಡ್ ಕಂಪನಿಗಳ, ಖಾಸಗಿ ಸಂಸ್ಥೆಗಳ, ಖಾಸಗಿ ವ್ಯಕ್ತಿಗಳಲ್ಲಿ ಹೀಗೆ ಅನೇಕ ಪ್ರಕಾರಗಳಿವೆ. ಇದರಂತೆ ಸ್ವತಂತ್ರ ವ್ಯಾಪಾರ, ಕೃಷಿ ಉದ್ಯಮಗಳಲ್ಲದೆ ಅನೇಕ ಪ್ರಕಾರದ ಸ್ವತಂತ್ರ ವೃತ್ತಿಗಳಿವೆ. ಕೃಷಿ ಆಧಾರಿತ ವೃತ್ತಿಗಳು, ಬುದ್ಧಿಜೀವಿಗಳ ವೃತ್ತಿ

ಗಳು, ಸಾರಿಗೆ ವೃತ್ತಿಗಳು. ಉದ್ಯಮ–ಕೈಗಾರಿಕೆಯ ವೃತ್ತಿಗಳು, ಏಜನ್ಸಿ ಹಾಗೂ ಗುತ್ತಿಗೆದಾರಿಕೆ ವೃತ್ತಿಗಳು, ಕಲಾಕಾರ ಹಾಗೂ ಕುಶಲ ಕರ್ಮಿಗಳ ವೃತ್ತಿಗಳು, ಮಶಿನರೀ ಹಾಗೂ ಯಂತ್ರ ಸಾಮುಗ್ರಿಗಳ ದುರಸ್ತೀದಾರಿಕೆ ವೃತ್ತಿ, ಮಾಲಕತ್ವದ ವೃತ್ತಿ, ರಾಜಕೀಯ, ಸಾಮಾಜಿಕ ಕಾರ್ಯಕರ್ತರ ವೃತ್ತಿ ಹೀಗೆ ವೃತ್ತಿಗಳಲ್ಲಿಯೂ ಅನೇಕ ಪ್ರಕಾರಗಳಿವೆ.

ಯಾರೊಬ್ಬರ ಉದ್ಯೋಗದ ವಿಷಯವಾಗಿ ತಿಳಿದುಕೊಳ್ಳಲು ಜಾತಕನ ಅನೇಕ ಗ್ರಹಗಳ ಬಲಾಬಲವನ್ನು, ಅನೇಕ ಸ್ಥಾನಗಳ ಹಾಗೂ ಸ್ಥಾನಾಧೀಶರ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಯಾವುದೊಂದು ಉದ್ಯೋಗಕ್ಕೆ ನಿರ್ದಿಷ್ಟ ಗ್ರಹವೇ ನಿರ್ದಿಷ್ಟ ಸ್ಥಾನವೇ ಕಾರಕವೂ ಪೋಷಕವೂ ಎಂದು ಹೇಳಲು ಬಾರದು. ಹೇಗೆಂದರೆ ಮೇಲೆ ವಿವರಿಸಿದಂತೆ ನೌಕರಿಯ ಕಾರಕ ಗ್ರಹ,ಲಗ್ನ, ಸ್ಥಾನ ಬೇರೆ ಬೇರೆ ಇದ್ದರೆ ಸ್ವತಂತ್ರ ಉದ್ಯೋಗಸ್ಥಾನ,ಸ್ವತಂತ್ರ ವೃತ್ತಿಯವರ ಕಾರಕ ಹಾಗೂ ಪೋಷಕ ಗ್ರಹಗಳು ವಿಭಿನ್ನವಿರುತ್ತವೆ. ಹೇಗೆಂದರೆ ಯಾವುದೇ ನೌಕರ ವರ್ಗದವರಿಗೆ ವಿಶೇಷವಾಗಿ ಕಾರಕೂನ ಹಾಗೂ ಅದಕ್ಕಿಂತಲೂ ಕೆಳದರ್ಜೆಯ ನೌಕರ ವರ್ಗದವರಿಗೆ ತೃತೀಯ ಹಾಗೂ ದಶಮ ಸ್ಥಾನಗಳು ಹಾಗೂ ಸ್ಥಾನಾಧೀಶರೂ ಕಾರಕರಿದ್ದರೆ, ಅಧಿಕಾರಿ ವರ್ಗದವರಿಗೆ ಪಂಚಮ, ಭಾಗ್ಯ, ಲಗ್ನ (ತನು) ಈ ಸ್ಥಾನಗಳು ಕಾರಕವು. ಇದಲ್ಲದೇ ತಾಂತ್ರಿಕ ವರ್ಗದವರಿಗೆ ತೃತೀಯ ಸ್ಥಾನವಿದ್ದರೆ, ಶಿಕ್ಷಕ ಅಧ್ಯಾಪಕರಿಗೆ,ದ್ವಿತೀಯ ಪಂಚಮ ಸ್ಥಾನಗಳು. ಹೀಗೆ ತೃತೀಯ,ಪಂಚಮ ಭಾಗ್ಯ, ಲಗ್ನ ಈ ಸ್ಥಾನಗಳು ನೌಕರ ವರ್ಗದವರಿಗೆ ಕಾರಕವು. ಇದರಂತೆ ನ್ಯಾಯವಾದಿಗಳಿಗೆ ದ್ವಿತೀಯ,ಪಂಚಮ ಸ್ಥಾನಗಳು ಕಾರಕವಿದ್ದರೆ, ಗಾಯಕರಿಗೆ ದ್ವಿತೀಯ ಸ್ಥಾನವು ಕಾರಕವು. ಯಂತ್ರ ಸಾಮುಗ್ರಿ ದುರಸ್ತಿದಾರರಿಗೆ ತೃತೀಯ ಸ್ಥಾನವು ಕಾರಕವು. ಹಾಟೆಲ್, ಲಾಜಿಂಗ, ಬೋರ್ಡಿಂಗ, ಗಿರಣಿ, ಕಾರಖಾನೆ, ಚಾಳ, ಟಾಕೀಜಗಳ ಮಾಲಕ ವರ್ಗದವರಿಗೆ ಚತುರ್ಥ ಹಾಗೂ ಭಾಗ್ಯಸ್ಥಾನಗಳು ಹಾಗೂ ಈ ಸ್ಥಾನಾಧೀಶರೂ ಕಾರಕರೂ ಪೋಷಕರೂ ಇರುತ್ತಾರೆ.

ಇದರಂತೆ ಯಾರೊಬ್ಬರ ಉದ್ಯೋಗದ ಬಗೆಗೆ ಅರಿತುಕೊಳ್ಳಲು ಜಾತಕನ ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ನಿರ್ದಿಷ್ಟ ಗ್ರಹವೇ ಯಾವುದೊಂದು ಉದ್ಯೋಗಕ್ಕೆ ಕಾರಕವೂ ಪೋಷಕವೂ ಇರುವದೆಂದು ಹೇಳಲು ಬಾರದು. ಏಕೆಂದರೆ ಹಿಂದೆ ಹೇಳಿದಂತೆ ಉದ್ಯೋಗ ದಲ್ಲಿಯೂ ಎರಡು ಪ್ರಕಾರ. ನೌಕರಿ ಹಾಗೂ ವೃತ್ತಿ ಈ ವಿಭಿನ್ನ ಉದ್ಯೋ ಗಕ್ಕೆ ವಿಭಿನ್ನ ಗ್ರಹಗಳು ಕಾರಕವಿರುತ್ತಾರೆ. ಏಕೆಂದರೆ ರವಿ, ಮಂಗಳ, ಗುರುಗಳು ಅಧಿಕಾರಿ ಕಾರಕ ಗ್ರಹಗಳು. ಬುಧ, ಶುಕ್ರ, ಶನಿಯರು ಸೇವಾ ಪೋಷಕ ಗ್ರಹಗಳು. ಪುರುಷ ರಾಶಿಯ ಚಂದ್ರನು ಅಧಿಕಾರಿ ಪೋಷಕ ಗ್ರಹವಿದ್ದರೆ, ಸ್ತ್ರೀ ರಾಶಿಯ ಚಂದ್ರನು ಸೇವಾಕಾರಕ ಗ್ರಹವು. ಇನ್ನು ಶನಿಯು ನ್ಯಾಯವಾದಿಗಳಿಗೂ. ಗುರುವು ಶಿಕ್ಷಕ ವೃತ್ತಿಗೂ, ಬುಧನು ವ್ಯಾಪಾರಿ ವೃತ್ತಿಗೂ, ಶನಿಯು ಕೃಷಿ ವೃತ್ತಿಗೂ, ಶುಕ್ರನು ಕಲಾಕಾರ ವೃತ್ತಿಗೂ, ರವಿಯು ಸಮಾಜ ಕಾರ್ಯಕರ್ತರ ವೃತ್ತಿಗೂ, ಮಂಗಳನು ಮಶಿನರೀ ವೃತ್ತಿಗೂ ಕಾರಕನು. ಹೀಗೆ ಯಾರೊಬ್ಬರ ಉದ್ಯೋಗದ ವಿಷಯವಾಗಿ ತಿಳಿದುಕೊಳ್ಳಲು ಅನೇಕ ಗ್ರಹಗಳ, ಅನೇಕ ಸ್ಥಾನಗಳ ಬಲಾ ಬಲವನ್ನು ಪರಿಶೀಲಿಸಬೇಕಾಗುತ್ತದೆ.

ಯಾರು ಯಾವ ಉದ್ಯೋಗ ಕೈಕೊಳ್ಳಬೇಕು. ವೃತ್ತಿಯೋ ? ನೌಕರಿಯೋ ? ವೃತ್ತಿ ಇದ್ದಲ್ಲಿ ಯಾವ ಪ್ರಕಾರದ್ದು, ನೌಕರಿ ಇದ್ದಲ್ಲಿ ಯಾವ ಪ್ರಕಾರದ ನೌಕರಿ. ಯಾವುದರಲ್ಲಿ ಯಶಸ್ಸು ಸಿಗುತ್ತದೆ, ಈ ಮೊದಲಾದ ವಿಷಯಗಳನ್ನು ಕುರಿತು ಈ ಗ್ರಂಥದಲ್ಲಿ ವಿವರಿಸುವ ಅಗತ್ಯ ವಿಲ್ಲ. ಏಕೆಂದರೆ ನಾವು ಬರೆದು ಪ್ರಕಟಿಸಿದ **"ಉದ್ಯೋಗ ಜ್ಯೋತಿಷ್ಯ" ಭಾಗ-೧ ನೌಕರಿಯ ಮಾರ್ಗದರ್ಶಿ** ಎಂಬ ೩೦೦ ಪುಟಗಳ ಆ ಗ್ರಂಥ ದಲ್ಲಿ ನೌಕರಿಯಲ್ಲಿಯ, ಖಾತೆಗಳಲ್ಲಿಯ, ಹುದ್ದೆಗಳಲ್ಲಿಯ ಪ್ರಕಾರಗಳು ಯಾವ ಜಾತಕನಿಗೆ, ಯಾವ ಖಾತೆಯು, ಯಾವ ಪ್ರಕಾರದ ಹುದ್ದೆ ಲಭಿಸು ತ್ತದೆ. ಅಲ್ಲದೆ ನೌಕರಿಗೆ ಸಂಬಂಧಿಸಿದ ನೌಕರಿ ಹತ್ತುವ ಕಾಲ, ಬಡತಿ, ಬದಲಿ ಮೊದಲಾದ ನೌಕರಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ಕುರಿತು ಸಂದೀರ್ಘವಾಗಿ ಆ ಗ್ರಂಥದಲ್ಲಿ ವಿವರಿಸಲಾಗಿದೆ. ಇದರಂತೆ

**"ಉದ್ಯೋಗ ಜ್ಯೋತಿಷ್ಯ" ಭಾಗ-೨ ವೃತ್ತಿ ಮಾರ್ಗದರ್ಶಿ** ಎಂಬ ೨೮೮ ಪುಟಗಳ ಈ ಗ್ರಂಥದಲ್ಲಿ ಸ್ವತಂತ್ರಉದ್ಯೋಗ ಕೈಕೊಳ್ಳುವವರ ಜಾತಕ ಹೇಗಿರುತ್ತದೆ. ನೌಕರಿ ಮಾಡಬೇಕೊ? ಸ್ವತಂತ್ರವೃತ್ತಿ ಕೈಕೊಳ್ಳಬೇಕೋ? ಸ್ವತಂತ್ರ ವೃತ್ತಿ ಕೈಕೊಳ್ಳುವವರ ಜಾತಕ ಹೇಗಿರುತ್ತದೆ. ಯಾವ ಜಾತಕನು ಯಾವ ಪ್ರಕಾರದ ಸ್ವತಂತ್ರ ವೃತ್ತಿ ಕೈಕೊಳ್ಳಬೇಕು. ಇವೇ ಮೊದಲಾದ ಸ್ವತಂತ್ರ ವೃತ್ತಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಪ್ರಸ್ತುತ ಈ ಗ್ರಂಥದ ಈ ಅಧ್ಯಾಯದಲ್ಲಿ ನೌಕರಿಯೇ ಇರಲಿ, ವೃತ್ತಿಯೇ ಇರಲಿ ಯಾರೊಬ್ಬ ಜಾತಕನ ಉದ್ಯೋಗದ ವಿಷಯವಾಗಿ ಗುಣಮಾಪನ ಹೇಗೆ ಮಾಡಬೇಕೆಂಬುದನ್ನು ಪರಿಶೀಲಿಸುವಾ.

ವಿಭಿನ್ನ ಸ್ಥಾನಗಳು, ವಿಭಿನ್ನ ಗ್ರಹಗಳು, ವಿಭಿನ್ನ ಪ್ರಕಾರದ ನೌಕರಿ, ವೃತ್ತಿಗಳಿಗೆ ಪೂರಕ ಪೋಷಕವಾಗಿದ್ದರೂ, ಯಾರೊಬ್ಬರ ಉದ್ಯೋಗದ ಬಗೆಗೆ ಗುಣಮಾಪನ ಮಾಡಲು ಮುಖ್ಯವಾಗಿ ಆರು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ೧) ದಶಮಸ್ಥಾನ ಹಾಗೂ ದಶಮೇಶನ ಬಲಾಬಲ, ೨) ಲಗ್ನ ಹಾಗೂ ಲಗ್ನೇಶನ ಬಲಾಬಲ, ೩) ದ್ವಿತೀಯ ಸ್ಥಾನ ಹಾಗೂ ದ್ವಿತಿಯೇಶನ ಬಲಾಬಲ, ೪) ಪಂಚಮ ಹಾಗೂ ಪಂಚಮೇಶನ ಬಲಾಬಲ ೫) ಚತುರ್ಥ ಹಾಗೂ ಚತುರ್ಥೇಶನ ಬಲಾಬಲ, ೬) ತೃತೀಯ ಹಾಗೂ ತ್ರತಿಯೇಶನ ಬಲಾಬಲ. ಈ ಆರೂ ಸಂಗತಿಗಳು ಪೂರಕವಾಗಿದ್ದರೆ ೬ ಗುಣಗಳಿಗೆ ೬ ಗುಣಗಳು ಲಭಿಸುತ್ತವೆ. ಈ ಆರೂ ಸಂಗತಿಗಳು ಪ್ರತಿಕೂಲವಿದ್ದರೆ ಶೂನ್ಯ ಗುಣವು. ಇವುಗಳಲ್ಲಿ ೧-೨ ಸಂಗತಿಗಳು ಪ್ರತಿಕೂಲ ವಿದ್ದರೆ ಅಷ್ಟು ಗುಣಗಳು ಕಡಿಮೆ ಬರುವವು. ಅವುಗಳ ವಿವರಣೆ ಹೀಗಿದೆ-

### ೧) ದಶಮಸ್ಥಾನ ಹಾಗೂ ದಶಮೇಶನ ಬಲಾಬಲದ ಮೇಲೆ :

ಉದ್ಯೋಗದ ಎರಡನೇ ಅರ್ಥವೆಂದರೆ ದಶಮಸ್ಥಾನವು. ನೈಸರ್ಗಿಕ ಸ್ಥಾನವಾದ ಉದ್ಯೋಗದ ದಶಮಸ್ಥಾನವೇ ಕಾರಕ ಸ್ಥಾನವು. ಏಕೆಂದರೆ ನೌಕರಿ, ವ್ಯಾಪಾರ, ಕೃಷಿ ವೃತ್ತಿ ಮೊದಲಾದ ಎಲ್ಲ ಉದ್ಯೋಗಕ್ಕೂ ದಶಮಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಆದುದರಿಂದ

ಯಾರೊಬ್ಬರ ಉದ್ಯೋಗದ ವಿಷಯವಾಗಿ ಗುಣವಾಪನ ಮಾಡುವಾಗ ದಶಮಸ್ಥಾನ ಹಾಗೂ ದಶಮೇಶನ ಬಲಾಬಲವನ್ನು ಪ್ರಾಮುಖ್ಯವಾಗಿ ಪರಿಶೀಲಿಸಬೇಕಾಗುತ್ತದೆ. ಅಂತೆಯೇ ಈ ಅಂಶಕ್ಕೆ ೩ ಗುಣಗಳನ್ನು ನಿರ್ಧರಿಸಲಾಗಿದೆ. ದಶಮಸ್ಥಾನವೆಂದರೆ ದಶಮಸ್ಥಾನದಲ್ಲಿರುವ ಗ್ರಹ ಅಥವಾ ಗ್ರಹಗಳು. ಅಲ್ಲದೇ ದಶಮಸ್ಥಾನದ ಮೇಲೆ ಹಾಗೂ ದಶಮೇಶನ ಮೇಲೆ ಯಾವ ಯಾವ ಗ್ರಹಗಳ ದೃಷ್ಟಿಯಿರುತ್ತದೆ ಎಂಬ ಅಂಶವು ಬಹಳ ಮಹತ್ವದ್ದು. ದಶಮಸ್ಥಾನದಲ್ಲಿರುವ ಗ್ರಹ ಹಾಗೂ ದಶಮೇಶ ಈ ಎರಡು ಸಂಗತಿಗಳು ಪೂರಕವಿದ್ದು ಪೋಷಕವಿದ್ದರೆ, ಬಲಾಢ್ಯರಿದ್ದರೆ ೩ ಗುಣಕ್ಕೆ ೩ ಗುಣ ಲಭಿಸುವವು. ಬಲಾಢ್ಯ ಎಂದರೆ ರಾಶಿಬಲ,ಸ್ಥಾನಬಲ ಎಂದು ಬೇರೆ ಹೇಳಬೇಕಾಗಿಲ್ಲ. ದಶಮ ಸ್ಥಾನದಲ್ಲಿರುವ ಗ್ರಹ ಮಾತ್ರ ಬಲಾಢ್ಯವಿದ್ದರೆ $1\frac{1}{3}$ ಗುಣ. ಇದರಂತೆ ದಶಮೇಶನು ಮಾತ್ರ ಬಲಾಢ್ಯನಿದ್ದರೂ ಕೂಡ $1\frac{1}{2}$ ಗುಣ. ಎರಡೂ ಅಂಶ ದುರ್ಬಲವಿದ್ದರೆ ಶೂನ್ಯಗುಣ.

## ೨) ಲಗ್ನ ಹಾಗೂ ಲಗ್ನೇಶನ ಬಲಾಬಲದ ಮೇಲೆ

ಉದ್ಯೋಗದ ವಿಷಯವಾಗಿ ಗುಣವಾಪನ ಮಾಡುವಾಗ ಕ್ರಮಶಃ ದಶಮದ ನಂತರ ಲಗ್ನ ಹಾಗೂ ಲಗ್ನೇಶನ ಬಲಾಬಲವನ್ನು ಪ್ರಾಮುಖ್ಯವಾಗಿ ಪರಿಶೀಲಿಸಬೇಕು. ಏಕೆಂದರೆ ಯಾವುದೊಂದು ಉದ್ಯೋಗ ಕೈಕೊಳ್ಳಲು ದೈಹಿಕ ಸಾಮರ್ಥ್ಯ ಬಹಳ ಮಹತ್ವದ್ದು. ಅಲ್ಲದೇ ಯಾವದೊಂದು ಉದ್ಯೋಗ ಕೈಕೊಳ್ಳಬೇಕೆಂಬ ಅಭಿಲಾಷೆ, ಸ್ವಭಾವ, ವ್ಯಕ್ತಿಮತ್ವ ಗುಣ ಧರ್ಮ, ಮಹತ್ವಾಕಾಂಕ್ಷೆ,ಧೋರಣೆ ಯಾವುದೊಂದು ಉದ್ಯೋಗಕ್ಕೆ ಇರುವ ಒಲವು. ಈ ಎಲ್ಲ ಸಂಗತಿಗಳು ಲಗ್ನದಲ್ಲಿರುವ ಗ್ರಹ ಹಾಗೂ ಲಗ್ನೇಶನ ಬಲಾಬಲದ ಮೇಲೆ ಅವಲಂಬಿಸಿರುತ್ತದೆ. ಆದುದರಿಂದ ಲಗ್ನದಲ್ಲಿರುವ ಗ್ರಹ ಹಾಗೂ ಲಗ್ನೇಶ ಬಲಾಢ್ಯರಿದ್ದರೆ ೧ ಗುಣ ಲಭಿಸುತ್ತದೆ. ಕೇವಲ ಲಗ್ನೇಶ ಬಲಾಢ್ಯನಿದ್ದು ಲಗ್ನದಲ್ಲಿರುವ ಗ್ರಹ ದುರ್ಬಲರಿದ್ದರೆ $\frac{1}{2}$ ಗುಣಃ ಕೇವಲ ಲಗ್ನದಲ್ಲಿರುವ ಗ್ರಹ ಬಲಾಢ್ಯವಿದ್ದು, ಲಗ್ನೇಶನು ದುರ್ಬಲನಿದ್ದರೂ

½ ಗುಣ ಲಭಿಸುತ್ತವೆ. ಆದರೆ ಲಗ್ನ ಹಾಗೂ ಲಗ್ನೇಶ ಈರ್ವರೂ ದುರ್ಬಲ ಎದ್ದರೆ ಶೂನ್ಯ ಗುಣಗಳು.

## ೩) ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲದ ಮೇಲೆ

ಉದ್ಯೋಗದ ಬಗೆಗೆ ಗುಣಮಾಪನ ಮಾಡುವಾಗ ದಶಮ, ಲಗ್ನ ಈ ಸ್ಥಾನಗಳ ನಂತರ ಪಂಚಮ ಸ್ಥಾನಕ್ಕೆ ಮಹತ್ವ ಕೊಡಬೇಕು. ಏಕೆಂದರೆ ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಯಾವುದೊಂದು ಉದ್ಯೋಗಕ್ಕೆ ಯಾರೊಬ್ಬರದು ಬಹಳ ಅವಧಿಯವರೆಗೆ ಏಕಸ್ವಾಮ್ಯವಿರುವುದಿಲ್ಲ. (ಮನೋಪಲಿ) ಅಂತೆಯೇ ಶೈಕ್ಷಣಿಕ ಅರ್ಹತೆಯು ಕೆಲ ವಿಶಿಷ್ಟ ಉದ್ಯೋಗಕ್ಕೆ ಮಹತ್ವದ ಅಂಶವು. ಪಂಚಮಸ್ಥಾನವಿದು ಶಿಕ್ಷಣದ ಸ್ಥಾನವು. ಶೈಕ್ಷಣಿಕ ಅರ್ಹತೆ ವಿರಲು ಪಂಚಮಸ್ಥಾನ ಪಂಚಮಾಧೀಶರ ಬಲಾಬಲ ಮಹತ್ವದ್ದು. ಅಲ್ಲದೇ ಪಂಚಮಸ್ಥಾನವಿದು ಹಣ ಸಂಚಯದ ಸ್ಥಾನವೂ ಹೌದು, (ಟ್ರೇಜರೀ). ಆದುದರಿಂದ ಪಂಚಮಸ್ಥಾನದಲ್ಲಿರುವ ಗ್ರಹ ಹಾಗೂ ಪಂಚಮೇಶ ಬಲಾಢ್ಯರಿದ್ದರೆ ೧ ಗುಣ ಲಭಿಸುತ್ತದೆ. ಪಂಚಮಸ್ಥಾನ ಹಾಗೂ ಪಂಚಮೇಶ ದುರ್ಬಲರಿದ್ದರೆ ಶೂನ್ಯಗುಣ. ಆದರೆ ಕೇವಲ ಪಂಚಮೇಶ ದುರ್ಬಲನಿದ್ದು ಪಂಚಮದಲ್ಲಿರುವ ಗ್ರಹ ಬಲಾಢ್ಯರಿದ್ದರೆ ½ ಗುಣ. ಇದರಂತೆ ಪಂಚಮದಲ್ಲಿಯ ಗ್ರಹ ದುರ್ಬಲವಿದ್ದು ಪಂಚಮೇಶನು ಬಲಾಢ್ಯನಿದ್ದರೂ ½ ಗುಣ ಲಭಿಸುತ್ತದೆ.

## ೪) ದ್ವಿತೀಯಸ್ಥಾನ ಹಾಗೂ ದ್ವಿತಿಯೇಶನ ಬಲಾಬಲದ ಮೇಲೆ

ಉದ್ಯೋಗದ ಬಗೆಗೆ ಗುಣಮಾಪನ ಮಾಡುವಾಗ ದಶಮ, ಲಗ್ನ, ಪಂಚಮಸ್ಥಾನಗಳ ನಂತರ ದ್ವಿತೀಯ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ದ್ವಿತೀಯ ಸ್ಥಾನವಿದು ಪಿತ್ರಾರ್ಜಿತ ಆಸ್ತಿಯ ಬಗೆಗೆ. ಮಾತುಗಾರಿಕೆಗಾಗಿ, ಕ್ರಯ ವಿಕ್ರಯಕ್ಕೆ ಸಂಬಂಧಿಸಿದ, ಹಾಡುಗಾರಿಕೆಗಾಗಿ ಇವೇ ಮೊದಲಾದ ವಿಷಯಗಳ ಕಾರಕ ಸ್ಥಾನವು. ಕೆಲ ಉದ್ಯೋಗಕ್ಕೆ ಮಾತುಗಾರಿಕೆಯೇ ಬಂಡವಾಳ ಇದ್ದರೆ, ಕೆಲ ಉದ್ಯೋಗಕ್ಕೆ ಪಿತ್ರಾರ್ಜಿತ ಆಸ್ತಿಯು

ರಕ್ಷಾಕವಚವು ಬೇಕಾಗುತ್ತದೆ. ಆದುದರಿಂದ ದ್ವಿತೀಯ ಸ್ಥಾನ, ದ್ವಿತಿಯೇಶನ ಬಲಾಢ್ಯರಿದ್ದರೆ ೧ ಗುಣ. ದ್ವಿತೀಯ ಸ್ಥಾನ ಹಾಗೂ ದ್ವಿತಿಯೇಶರು ದುರ್ಬಲರಿದ್ದರೆ ಶೂನ್ಯಗುಣ. ದ್ವಿತಿಯೇಶ ಮಾತ್ರ ಬಲಾಢ್ಯನಿದ್ದು, ದ್ವಿತೀಯದಲ್ಲಿ ದುರ್ಬಲ ಗ್ರಹವಿದ್ದರೆ ½ ಗುಣ. ಇದರಂತೆ ದ್ವಿತೀಯದಲ್ಲಿ ಬಲಾಢ್ಯ ಗ್ರಹವಿದ್ದು, ದ್ವಿತಿಯೇಶನು ದುರ್ಬಲನಿದ್ದರೂ ½ಗುಣ ದೊರೆಯುತ್ತದೆ.

## ೫) ತೃತೀಯ ಸ್ಥಾನ ಹಾಗೂ ತೃತಿಯೇಶನ ಬಲಾಬಲದ ಮೇಲೆ

ಶ್ರಮ ಜೀವಿಗಳು, ಬಾಹ್ಯ ಹಾಗೂ ಓಡಾಡಿ ಕೆಲಸ ಮಾಡುವವರು, ತಾಂತ್ರಿಕ ಕೆಲಸ ಮಾಡುವವರು (ಟೆಕ್ನಿಶಿಯನ್) ಕೆಳದರ್ಜೆಯ ನೌಕರ ವರ್ಗದವರು, ಸ್ವಂತ ಪರಿಶ್ರಮದಿಂದ ಕಾರ್ಯ ಮಾಡುವವರು, ಇವೇ ಮೊದಲಾದ ಕೆಲಸ ಮಾಡುವವರಿಗೆ ತೃತೀಯ ಸ್ಥಾನವನ್ನು ಪರಿಶೀಲಿಸ ಬೇಕಾಗುತ್ತದೆ. ಆದುದರಿಂದ ತೃತೀಯ ಸ್ಥಾನ ಹಾಗೂ ತೃತಿಯೇಶ ಬಲಾಢ್ಯನಿದ್ದರೆ ೧ ಗುಣ ಲಭಿಸುತ್ತದೆ. ತೃತೀಯ ಸ್ಥಾನ ಮಾತ್ರ ಬಲಾಢ್ಯವಿದ್ದು ತೃತಿಯೇಶ ನಿರ್ಬಲನಿದ್ದರೆ ½ ಗುಣವೂ, ತೃತಿಯೇಶ ಬಲಾಢ್ಯನಿದ್ದು ತೃತೀಯ ಸ್ಥಾನದಲ್ಲಿ ದುರ್ಬಲ ಗ್ರಹವಿದ್ದರೂ ½ ಗುಣ ಲಭಿಸುತ್ತದೆ. ಆದರೆ ತೃತೀಯ ಸ್ಥಾನ ಹಾಗೂ ತೃತಿಯೇಶನು ದುರ್ಬಲವಿದ್ದರೆ ಶೂನ್ಯಗುಣ.

## ೬) ಚತುರ್ಥಸ್ಥಾನ ಹಾಗೂ ಚತುರ್ಥೇಶನ ಬಲಾಬಲದ ಮೇಲೆ

ಉದ್ಯೋಗದ ವಿಷಯವಾಗಿ ಗುಣ ಮಾಪನ ಮಾಡುವಾಗ ಚತುರ್ಥ ಸ್ಥಾನದಲ್ಲಿರುವ ಗ್ರಹ ಹಾಗೂ ಚತುರ್ಥೇಶನ ಬಲಾಬಲದ ವಿಷಯವಾಗಿ ಬಹಳ ಪ್ರಾಮುಖ್ಯವಿದೆ. ಕಾರಣ ಚತುರ್ಥ ಸ್ಥಾನಕ್ಕೆ ಸುಖಸ್ಥಾನವೆಂದು ಅನ್ನುತ್ತಾರೆ. ಮನುಷ್ಯರಿಗೆ ದೊರೆಯಬಹುದಾದ ಮನೆ, ಬಂಗ್ಲೆ, ವಾಹನ ಸೌಖ್ಯ, ಆಳು-ಹೋಳು, ನೌಕರ ಚಾಕರರ ಸೌಖ್ಯ, ವಿಲಾಸಮಯ ವಸ್ತುಗಳ, ಬೆಲೆಯುಳ್ಳ ವಸ್ತುವಡವೆಗಳ ಖರೀದಿಸುವ ಹಾಗೂ ಉಪಭೋಗಿಸುವ ಸೌಕರ್ಯ ಪಡೆಯುವಿಕೆ, ಚಾಳ, ಟಾಕೀಜ, ಗಿರಣಿ, ಕಾರಖಾನೆ, ಹಾಟೇಲ, ಬೋರ್ಡಿಂಗ, ಲಾಜಿಂಗ ಮೊದಲಾದವುಗಳ ಮಾಲಕತ್ವ ಹೊಂದಿ ಉಪ

ಜೀವನ ಮಾಡುವಿಕೆ, ಸ್ಥಾವರ ಇಸ್ಟೇಟ ಪಡೆಯುವಿಕೆ. ಇವೇ ಮೊದಲಾದ ಐಹಿಕ ಸೌಖ್ಯದ ಸ್ಥಾನವಾದ ಸುಖ ಸ್ಥಾನವು ಬಹಳ ಮಹತ್ವಪೂರ್ಣದ್ದು. ಆದುದರಿಂದ ಚತುರ್ಥ ಸ್ಥಾನದಲ್ಲಿರುವ ಗ್ರಹ ಹಾಗೂ ಚತುರ್ಥೇಶನು ಬಲಾಢ್ಯನಿದ್ದರೆ ೧ ಗುಣ. ಚತುರ್ಥೇಶ ಹಾಗೂ ಚತುರ್ಥದಲ್ಲಿರುವ ಗ್ರಹ ದುರ್ಬಲವಿದ್ದರೆ ಶೂನ್ಯ ಗುಣ. ಚತುರ್ಥದಲ್ಲಿ ಬಲಾಢ್ಯ ಗ್ರಹವಿದ್ದು ಚತುರ್ಥೇಶ ನಿರ್ಬಲವಿದ್ದರೂ ½ ಗುಣ. ಚತುರ್ಥದಲ್ಲಿ ದುರ್ಬಲ ಗ್ರಹ ವಿದ್ದು, ಚತುರ್ಥೇಶ ಬಲಾಢ್ಯನಿದ್ದರೂ ½ ಗುಣ. ಹೀಗೆ ಈ ಆರು ಸಂಗತಿ ಗಳನ್ನು ತೂಗಿ ಉದ್ಯೋಗದ ವಿಷಯವಾಗಿ ಗುಣಮಾಪನ ಮಾಡಬೇಕು.



# ೭

# ಸಂತಾನ

## ಗುಣಗಳು ೮

"ಕುಂಡಲಿ ಗುಣ ನಿರ್ಣಯ"ದಲ್ಲಿ ಸಂತತಿ ಸೌಖ್ಯವೂ ಕೂಡ ಬಹಳ ಮುಖ್ಯ ಪಾತ್ರ ವಹಿಸುತ್ತದೆ. ಅದರಲ್ಲಿಯೂ ವೃದ್ಧಾಪ್ಯದಲ್ಲಿ ಸಂತತೀ ಸೌಖ್ಯದ ಪಾತ್ರ ಹೆಚ್ಚು ಪ್ರಮುಖವಾಗುತ್ತದೆ. ಇದಲ್ಲದೇ ಸಂತತಿ ಸೌಖ್ಯವು ಇತರ ದೃಷ್ಟಿಗಳಿಂದಲೂ ಮಹತ್ವದ್ದಾಗಿರುತ್ತದೆ. ಆದುದರಿಂದ ಸಂತತಿ ಸೌಖ್ಯದ ವಿವಿಧ ಮುಖಗಳ ಸಂಕ್ಷಿಪ್ತ ಪರಿಚಯ ಮಾಡಿಕೊಳ್ಳುವುದು ಸೂಕ್ತವು.

ಮೊದಲನೆಯದಾಗಿ ಜೀವನದಲ್ಲಿಯ ಇತರ ಎಲ್ಲ ವಿಷಯಗಳಲ್ಲಿ ಯಶಸ್ವಿಯಾದ ಜಾತಕನಿಗೆ ಮಕ್ಕಳೇ ಇಲ್ಲದೇ ಹೋದರೆ, ಅದರಲ್ಲಿಯೂ ಗಂಡು ಸಂತಾನ ಇಲ್ಲದೇ ಹೋದರೆ ಅವನು ಇಲ್ಲವೇ ಅವಳು ದಾರುಣ ಸ್ಥಿತಿಯನ್ನು ಎದುರಿಸಬೇಕಾಗುತ್ತದೆ.

ಎರಡನೆಯದಾಗಿ ಮಕ್ಕಳಿಂದಲೇ (ದುರ್ವ್ಯಸನಿ ಮಕ್ಕಳಿಂದ) ತಂದೆ-ತಾಯಿಗಳು ಪೂರ್ಣ ಹಾಳಾದ ಉದಾಹರಣೆಗಳಿಗೇನೂ ಕಡಿಮೆ ಇಲ್ಲ. ದುರಾಚಾರಿ ಮಕ್ಕಳಿಂದ ಪದಚ್ಯುತಿಗೊಂಡ, ಗತಿಗೆಟ್ಟ ರಾಜಕಾರಣಿಗಳಿಗೂ ದುಂದುಗಾರ ಮಕ್ಕಳಿಂದ ಮನೆಹಾಳು ಮಾಡಿಕೊಂಡ ಶ್ರೀಮಂತ ವರ್ಗದ ತಂದೆ-ತಾಯಿಗಳು, ದುಶ್ಚಟಗಳಿಗೆ ಒಳಗಾದ ಮಕ್ಕಳಿಂದ ಮಾನಹಾನಿ ಮಾಡಿಕೊಂಡ ತಂದೆ-ತಾಯಿಗಳ ಸಂಕಟ ಪಡುತ್ತಿರುವ ಒಂದು ವರ್ಗ.

ಮೂರನೇಯದಾಗಿ ಅಂಗವಿಕಲರು, ಹುಟ್ಟು ಕುರುಡರು, ಹುಟ್ಟು ಮೂಕರು, ಮಂದಬುದ್ಧಿಯವರು. ಇಂಥ ಮಕ್ಕಳನ್ನು ಪಡೆದು ಗೋಳಾಡುತ್ತಿರುವ ಮೂರನೇಯ ವರ್ಗ.

ನಾಲ್ಕನೇಯದಾಗಿ ಮಕ್ಕಳ ಮನಸ್ತಾಪ. ಕೌಟುಂಬಿಕ ಕಲಹದಿಂದಾಗಿ ಮನೆಯ ಸುಖಕ್ಕೆ ಎರವಾದ ತಂದೆ-ತಾಯಿಗಳು ಹಾಗೂ ವೃದ್ಧಾಪ್ಯ ಸಮಯದಲ್ಲಿ ಕೈಗೆ ಬಂದ ಮಗ (ಅಥವಾ ಮಗಳು) ನು ಅಪಮೃತ್ಯುಗೀಡಾದಾಗ ಅರ್ಥಾತ್ ಸೊಸೆಯನ್ನು, ಮೊಮ್ಮಕ್ಕಳನ್ನು ಸಾಕಿ ಸಲುಹಬೇಕಾಗಿ ಬಂದ ಪ್ರಸಂಗವನ್ನು ಎದುರಿಸಲು ಹೆಣಗಾಡುತ್ತಿರುವ ನಾಲ್ಕನೆಯ ವರ್ಗ.

ಐದನೇಯ ಹಾಗೂ ಕೊನೆಯದಾಗಿ ಮಕ್ಕಳಿಂದಲೇ ಕೋರ್ಟಿನ ಕಟ್ಟೆ ಹತ್ತಬೇಕಾದ, ಮಕ್ಕಳಿಂದಲೇ ಕಾರಾಗೃಹ ಕಂಡ ಹಾಗೂ ಮಕ್ಕಳಿಂದಲೇ ಜೀವದ ಭಯ ಕಾಡುತ್ತಿರುವ ತಂದೆ-ತಾಯಿಗಳ ಐದನೇ ವರ್ಗವು. ಈ ಎಲ್ಲವೂ ಒಂದೆಡೆ.

ಒಳ್ಳೆಯ ಮಕ್ಕಳಿಂದ, ಸುಸಂಸ್ಕೃತ ಮಕ್ಕಳಿಂದ, ಬುದ್ಧಿವಂತ ಮಕ್ಕಳಿಂದ ಕೀರ್ತಿಯನ್ನು ಬೆಳಸಿಕೊಂಡ ತಂದೆ-ತಾಯಿಗಳು ಇನ್ನೊಂದೆಡೆ_ಅಷ್ಟೇ ಏಕೆ ಮಕ್ಕಳಿಂದ ಮನೆತನಕ್ಕೂ ಕೀರ್ತಿ ಪಡೆದ ಪರಿವಾರವೂ ಇದೆ. ಹೀಗೆ ಸಂತತಿ ಸೌಖ್ಯ-ಅಸೌಖ್ಯದ ವಿಷಯವಾಗಿ ಅರ್ಥಾತ್ ಸಂತಾನದ ವಿಷಯವಾಗಿ ಗುಣವಾಪನ ಹೇಗೆ ಮಾಡಬೇಕು ಎಂಬುವನ್ನು ಪರಿಶೀಲಿಸುವಾ.

ಸಂತತೀ ಸೌಖ್ಯದ ವಿಷಯವಾಗಿ ತಿಳಿಯಲು ನಾವು ಮೂರು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ೧) ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲ, ೨) ಗುರುವಿನ ಬಲಾಬಲ, ೩) ಸಂತತೀ ಸೌಖ್ಯದ ಪೋಷಕ ಯೋಗಗಳು ಹಾಗೂ ಸಂತತೀ ಸೌಖ್ಯದ ಮಾರಕ ಯೋಗಗಳು. ಈ ಮೂರೂ ಸಂಗತಿಗಳು ಪೂರಕವಿದ್ದರೆ, ೮ ಗುಣಗಳಿಗೆ ೮ ಗುಣಗಳು ಲಭಿಸುವವು. ಈ ಮೂರೂ ಸಂಗತಿಗಳು ಪ್ರತಿಕೂಲವಿದ್ದರೆ ಶೂನ್ಯಗುಣ

ಲಭಿಸುತ್ತದೆ. ಇದರಲ್ಲಿ ೧-೨ ಸಂಗತಿಗಳು ಪ್ರತಿಕೂಲವಿದ್ದರೆ ಅಷ್ಟು ಗುಣಗಳು ಕಡಿಮೆ ಬರುತ್ತವೆ. ಇದರಲ್ಲಿ ಪಂಚಮ ಸ್ಥಾನದಲ್ಲಿರುವ ಗ್ರಹ ಹಾಗೂ ಪಂಚಮೇಶನ ಬಲಾಬಲಕ್ಕೆ ೩ ಗುಣಗಳನ್ನು, ಗುರುವಿನ ಬಲಾಬಲಕ್ಕೆ ೩ ಗುಣಗಳನ್ನು, ಸಂತತಿ ಸೌಖ್ಯದ ಪೋಷಕ ಯೋಗಕ್ಕೆ ೨ಗುಣ ಗಳಿಂದ ನಿರ್ಧರಿಸಲಾಗಿದೆ. ಅವುಗಳ ವಿವರಣೆ ಹೀಗಿದೆ.

## ೧) ಪಂಚಮ ಸ್ಥಾನದ ಮೇಲಿಂದ :

ಹೇಗೆ ಮಾತೃಸೌಖ್ಯಕ್ಕೆ ಚತುರ್ಥ ಸ್ಥಾನವು, ಪಿತೃಸೌಖ್ಯಕ್ಕೆ ದಶಮ ಸ್ಥಾನವು ಕಾರಕವೋ ಹಾಗೆ ಸಂತಾನ ಯೋಗಕ್ಕೆ ಹಾಗೂ ಸಂತತಿ ಸೌಖ್ಯಕ್ಕೆ ಪಂಚಮ ಸ್ಥಾನವು ಕಾರಕವೂ, ಮಾರಕವೂ ಪೋಷಕವೂ ಸ್ಥಾನವಿರುತ್ತವೆ. ಆದುದರಿಂದ ಪಂಚಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ ಸಂತತೀಸೌಖ್ಯ ಸಿಗುತ್ತದೆ. ಅದರಲ್ಲಿಯೂ ಶುಭ ಗ್ರಹಗಳಾದ ಗುರು, ಚಂದ್ರ, ಶುಕ್ರರು ಈ ಮೂರೂ ಗ್ರಹಗಳಲ್ಲಿ ಯಾವುದಾದರೊಂದು ಗ್ರಹವು ಬಲಾಢ್ಯವಾಗಿ ಪಂಚಮದಲ್ಲಿದ್ದರೆ ಸಂತಾನ ಪ್ರಾಪ್ತಿ ಹಾಗೂ ಸಂತತಿಸೌಖ್ಯ ಸಿಗುತ್ತದೆ. ಆದುದರಿಂದ 1½ ಗುಣಗಳು ಲಭಿಸುತ್ತವೆ. ಆದರೆ ಪಂಚಮ ಸ್ಥಾನದಲ್ಲಿ ರಾಹು, ಕೇತು, ಶನಿ, ಬುಧ, ಮಂಗಳ, ರವಿಯರು ಈ ಆರೂ ಗ್ರಹಗಳು ಕ್ರಮಶಃ ಸಂತತೀ ಸೌಖ್ಯಕ್ಕೆ ಹಾಗೂ ಸಂತಾನ ಯೋಗಕ್ಕೆ ಮಾರಕ ಗ್ರಹ ಗಳು, ಆದರಲ್ಲಿಯೂ ರಾಹು, ಕೇತು, ಶನಿಯರು ಸಂತತೀ ಸೌಖ್ಯಕ್ಕೆ ಬಹಳ ಮಾರಕ ಗ್ರಹಗಳು. ಆ ಬಳಿಕ ರವಿ, ಮಂಗಳ, ಬುಧರು ಮಾರಕರು ಆದರೆ ರಾಹು, ಕೇತು, ಶನಿಯರಷ್ಟು ರವಿ, ಮಂಗಳ, ಬುಧರು ಮಾರಕ ರಿರುವುದಿಲ್ಲ. ಈ ಆರೂ ಗ್ರಹಗಳಲ್ಲಿ ವಿಶೇಷವಾಗಿ ರಾಹು, ಕೇತು, ಶನಿ ಯರು ಪಂಚಮದಲ್ಲಿದ್ದರೆ ಸಂತತೀ ಸೌಖ್ಯಕ್ಕೆ ಮಾರಕರು. ಆದುದರಿಂದ ಶೂನ್ಯಗುಣ ದೊರೆಯುತ್ತದೆ. ರವಿ, ಮಂಗಳರು ಬಲಾಢ್ಯರಾಗಿ ಪಂಚಮ ದಲ್ಲಿದ್ದರೆ ಸಂತಾನ ಲಾಭವಾಗುತ್ತದೆ. ಆದರೆ ಆಜ್ಞಾಧಾರಕ ಮಕ್ಕಳಿರುವು ದಿಲ್ಲ. ಬಲಾಢ್ಯ ಬುಧನು ಪಂಚಮದಲ್ಲಿದ್ದರೆ ಸಂತಾನಲಾಭವಾಗುತ್ತದೆ.

ಯಾವುದೇ ಗ್ರಹವು ಪಂಚಮೇಶರಾಗಿ ಪಂಚಮದಲ್ಲಿದ್ದರೆ ಸಂತಾನ ಲಾಭವೂ ಇರುತ್ತದೆ. ಹಾಗೂ ಸಂತತೀ ಸೌಖ್ಯಸಹ ಲಭಿಸುತ್ತದೆ. ಶನಿ

ಪಂಚಮೇಶನಾಗಿ ಪಂಚಮದಲ್ಲಿದ್ದರೆ ಸಂತಾನಲಾಭವಾಗುತ್ತದೆ. ಆದರೆ ಕನ್ಯಾ ಸಂಖ್ಯೆ ಹೆಚ್ಚು. ಯಾವುದೇ ರಾಶಿಯ ರಾಹು, ಕೇತು, ಪಂಚಮ ದಲ್ಲಿದ್ದರೆ ಆದರಲ್ಲಿಯೂ ರಾಹು ಇದ್ದರೆ ಗರ್ಭಕ್ಕೆ, ಗರ್ಭ ಬೆಳವಣಿಗೆಗಳಿಗೆ ಪ್ರಸೂತಿಗೆ ಮಾರಕವು. ಚಂದ್ರ, ಶುಕ್ರರು ಪಂಚಮೇಶರಾಗಿ ಪಂಚಮದಲ್ಲಿ ದ್ದರೆ ಕನ್ಯಾ ಸಂತತಿ ಬಹಳ ಹಾಗೂ ಸಂತತೀ ಸೌಖ್ಯ ಸಿಗುತ್ತದೆ. ರವಿ, ಮಂಗಳ, ಗುರುಗಳು ಪಂಚಮೇಶರಾಗಿ ಪಂಚಮದಲ್ಲಿದ್ದರೆ ಗಂಡು ಸಂತತಿ ಬಹಳ ಹಾಗೂ ಸಂತತೀ ಸೌಖ್ಯ ಸಿಗುತ್ತದೆ. ಬುಧನು ಪಂಚಮೇಶನಾಗಿ ಪಂಚಮದಲ್ಲಿದ್ದರೆ ಸಂತತೀ ಸೌಖ್ಯ ಸಿಗುತ್ತದೆ.

ಹಿಂದೆ ಹೇಳಿದಂತೆ ಯಾವುದೇ ಗ್ರಹವು ಪಂಚಮೇಶರಾಗಿ ಪಂಚಮ ದಲ್ಲಿದ್ದರೆ ಸ್ಥಾನಬಲದಿಂದ ಸಂತಾನಲಾಭ ಹಾಗೂ ಸಂತತೀ ಸೌಖ್ಯ ಸಿಗು ತ್ತದೆ. ಆದರೆ ಯಾವುದೇ ಗ್ರಹವು ಪಂಚಮೇಶರಾಗಿ ಬಲಾಢ್ಯರಿದ್ದರೆ ಸಂತಾನಲಾಭವೇನೋ ಆಗುತ್ತದೆ. ಆದರೆ ಸಂತತೀ ಸೌಖ್ಯ ಸಿಗುತ್ತದೆಂದು ಹೇಳಲು ಬಾರದು. (ಗುರು, ಚಂದ್ರ, ಶುಕ್ರರ ಹೊರತಾಗಿ) ಪಂಚಮೇಶನು ಬಲಾಢ್ಯನಾಗಿದ್ದರೆ ಸಂತತೀ ಸೌಖ್ಯ ಸಿಗುತ್ತದೆ. ಬಲಾಢ್ಯನೆಂದರೆ ಈ ಹಿಂದೆ ಹೇಳಿದಂತೆ ರಾಶಿ ಬಲದವನೂ ಸ್ಥಾನಬಲದವನೂ ಇದ್ದರೆ ಸಂತಾನ ಲಾಭ ಹಾಗೂ ಸಂತತೀ ಸೌಖ್ಯ ಸಿಗುತ್ತದೆ. ಆದುದರಿಂದ $1\frac{1}{2}$ ಗುಣ ಲಭಿಸುತ್ತದೆ. ಆದರೆ ಕೇವಲ ಪಂಚಮ ಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದರೆ $1\frac{1}{2}$ ಗುಣ ಲಭಿಸುತ್ತದೆ. ಇದರಂತೆ ಕೇವಲ ಪಂಚಮೇಶ ಬಲಾಢ್ಯನಿದ್ದರೂ $1\frac{1}{2}$ ಗುಣ ಲಭಿಸುತ್ತವೆ. ಆದರೆ ಪಂಚಮ ಸ್ಥಾನದಲ್ಲಿ ಬಲಾಢ್ಯ ಗ್ರಹ ಹಾಗೂ ಪಂಚಮೇಶ ಬಲಾಢ್ಯನಿದ್ದರೆ ಮಾತ್ರ ೩ ಗುಣಗಳಿಗೆ ೩ ಗುಣಗಳು ಲಭಿಸುವವು. ಆದರೆ ಪಂಚಮದಲ್ಲಿ ದುರ್ಬಲ ಗ್ರಹ, ಪಂಚಮೇಶನೂ ದುರ್ಬಲನಿದ್ದರೆ ಮಾತ್ರ ಶೂನ್ಯ ಗುಣ ಲಭಿಸುತ್ತದೆ.

೧) ಗುರುವಿನ ಮೇಲಿಂದ

ಹೇಗೆ ಮಾತೃಸೌಖ್ಯಕ್ಕೆ ಚಂದ್ರನು ಪೋಷಕ ಗ್ರಹವೋ, ಹೇಗೆ ಪತಿ–ಪತ್ನೀ ಸೌಖ್ಯಕ್ಕೆ ಶುಕ್ರನು ಪೋಷಕ ಗ್ರಹವೋ, ಹೇಗೆ ಪಿತೃಸೌಖ್ಯಕ್ಕೆ ರವಿ

ಕಾರಕ ಗ್ರಹವೋ ಹಾಗೆ (ಸದೃಢ ಪ್ರಕೃತಿಗೆ) ಹೇಗೆ ಆರೋಗ್ಯ ಸೌಖ್ಯಕ್ಕೆ ಸೂರ್ಯನು ಪೋಷಕ ಗ್ರಹವೋ ಹಾಗೆ ಸಂತತೀ ಸೌಖ್ಯ ಹಾಗೂ ಸಂತಾನ ಲಾಭಕ್ಕೆ ಗುರುವು ಪೋಷಕ ಗ್ರಹ. ಉಳಿದೆಲ್ಲ ಗ್ರಹಗಳು ನಿರ್ಬಲವಿದ್ದು, ಕೇವಲ ಗುರು ಮಾತ್ರ ಪಂಚಮೇಶನಾಗಿ ಬಲಾಢ್ಯನಿದ್ದರೆ ಅಥವಾ ಬಲಾಢ್ಯ ನಾದಿ ಪಂಚಮದಲ್ಲಿದ್ದರೆ ಸಂತತಿ ಸೌಖ್ಯ ಮಾತ್ರ ಖಂಡಿತ ಸಿಗುತ್ತದೆ. ಜೀವನ ದಲ್ಲಿಯ ಉಳಿದ ಸಂಗತಿಗಳು ದೊರೆಯಬಹುದು, ದೊರೆಯದೇ ಇರ ಬಹುದು. ಆದರೆ ಬಲಾಢ್ಯ ಗುರು ಪಂಚಮದಲ್ಲಿದ್ದರೆ ಸಂತತಿ ಸೌಖ್ಯ ಖಂಡಿತ ಲಭಿಸುತ್ತದೆ. ಅಷ್ಟೇ ಏಕೆ ಬಲಾಢ್ಯ ಗುರುವಿನ ಶುಭದೃಷ್ಟಿಯು ಪಂಚಮಸ್ಥಾನದ ಮೇಲಾಗಲೀ, ಪಂಚಮೇಶನ ಮೇಲಾಗಲಿ ಇದ್ದರೂ ಕೂಡ ಸಂತಾನಲಾಭ ಹಾಗೂ ಸಂತತೀಸೌಖ್ಯ ಸಿಗುತ್ತದೆ. ಅಂದ ಬಳಿಕ ಗುರುವಿನ ಮಹತ್ವ ಸಂತತೀ ಸೌಖ್ಯದ ವಿಷಯವಾಗಿ ಎಷ್ಟು ಇರುತ್ತದೆಂಬುದರ ಕಲ್ಪನೆ ಬರುತ್ತದೆ. ಆದುದರಿಂದ ಜಾತಕದಲ್ಲಿ ಗುರುವು ಬಲಾಢ್ಯನಿದ್ದರೆ ೩ ಗುಣ ಗಳಿಗೆ ೩ ಗುಣಗಳು ಲಭಿಸುವವು. ಬಲಾಢ್ಯನೆಂದರೆ ರಾಶಿ ಬಲದವ ಸ್ಥಾನ ಬಲದವ, ಯೋಗಕಾರಕ ಹಾಗೂ ಅಸ್ತ, ವಕ್ರ, ನೀಚ, ಬಾಲ್ಯಾವಸ್ಥೆ, ವೃದ್ಧಾಪ್ಯ ಈ ಎಲ್ಲ ದುರ್ಬಲ ಸಂಗತಿಗಳಿಲ್ಲದವನಿದ್ದರೆ ಮಾತ್ರ ೩ ಗುಣ ಗಳಿಗೆ ೩ ಗುಣ ಲಭಿಸುತ್ತವೆ. ಕೇವಲ ರಾಶಿ ಬಲದವನಿದ್ದು, ಸ್ಥಾನಬಲ ದವನಿಲ್ಲದಿದ್ದರೆ $1\frac{1}{2}$ ಗುಣ ಲಭಿಸುತ್ತವೆ. ಇದರಂತೆ ಕೇವಲ ಸ್ಥಾನಬಲದವ ನಿದ್ದು, ರಾಶಿಬಲದವನಿಲ್ಲದಿದ್ದರೂ ಕೂಡ $1\frac{1}{2}$ ಗುಣಗಳು ಲಭಿಸುತ್ತವೆ. ಆದರೆ ಅದೇ ಗುರುವು ನೀಚ, ಶತೃಕ್ಷೇತ್ರಿ, ಅಸ್ತಂಗತ, ವೃದ್ಧಾಪ್ಯ, ಬಾಲ್ಯಾ ವಸ್ಥೆ ಇದ್ದು, ಆರನೇ, ಎಂಟನೇ, ಹನ್ನೆರಡನೇ ಸ್ಥಾನಗಳಲ್ಲಿದ್ದರೆ (ಸ್ಥಾನಬಲ ಇಲ್ಲದಿದ್ದರೆ) ಶೂನ್ಯ ಗುಣಗಳು ಲಭಿಸುವವು.

## ೩) ಸಂತತೀಸೌಖ್ಯದ ಪೋಷಕ ಹಾಗೂ ಮಾರಕ ಯೋಗಗಳು

### ೧ ಸಂತತೀಸೌಖ್ಯದ ಪೋಷಕ ಯೋಗಗಳು

೧) ಗುರು,-ಶುಕ್ರ, ಗುರು,-ಚಂದ್ರ ಇವರ ಯುತಿಯೋಗ ಪ್ರತಿಯೋಗವು ಪಂಚಮ ಲಾಭಸ್ಥಾನಗಳಲ್ಲಿ ಆದರೆ ಸಂತತೀಸೌಖ್ಯ ಸಿಗುತ್ತದೆ.

೨) ಬಲಾಢ್ಯ ಗುರುವು ಲಗ್ನ ಪಂಚಮಲಾಭ ನವಮ ಈ ನಾಲ್ಕು ಸ್ಥಾನಗಳಲ್ಲಿದ್ದರೆ ಸಂತತೀಸೌಖ್ಯ ಖಂಡಿತ ಸಿಗುತ್ತದೆ.

೩) ಪಂಚಮಸ್ಥಾನವಲ್ಲಿ ಬಲಾಢ್ಯಗ್ರಹವಿದ್ದು ಪಂಚಮೇಶನು ಬಲಾಢ್ಯನಿದ್ದರೆ ಸಂತಾನಲಾಭ ಹಾಗೂ ಸಂತತೀಸೌಖ್ಯಸಿಗುತ್ತದೆ.

೪) ಬಲಾಢ್ಯ ಗುರುವಿನ ಶುಭದೃಷ್ಟಿಯು ಪಂಚಮಸ್ಥಾನದ ಮೇಲಾಗಲೀ ಪಂಚಮೇಶನ ಮೇಲಾಗಲಿ ಇದ್ದರೆ ಸಂತತೀಸೌಖ್ಯ ಸಿಗುತ್ತದೆ.

೫) ಜಲರಾಶಿಯಲ್ಲಿಯ ಪಂಚಮದಲ್ಲಿ ಚಂದ್ರ ಅಥವಾ ವಾಯು ರಾಶಿಯ ಬುಧ ಶುಕ್ರರು ಪಂಚಮದಲ್ಲಿದ್ದು ಅಥವಾ ಯಾವುದೇ ರಾಶಿಯ ಗುರುವು ಪಂಚಮದಲ್ಲಿದ್ದರೆ ಸಂತತೀಸೌಖ್ಯ ಸಿಗುತ್ತದೆ.

ಹೀಗೆ ಮೇಲೆ ಬರೆದ ಯಾವುದೊಂದು ಯೋಗವಿದ್ದರೆ ೨ ಗುಣಗಳಿಗೆ ೨ ಗುಣಗಳು ಲಭಿಸುತ್ತವೆ. ಸಂತತೀಸೌಖ್ಯದ ಅನೇಕ ಯೋಗಗಳಿವೆ. ಆದರೆ ಸಂತತೀಸೌಖ್ಯದ ಗುಣಮಾಪನ ಮಾಡುವಾಗ ಹೀಗೆ ಗುಣಮಾಪನ ಮಾಡಬೇಕುಎಂಬುದರ ತಿಳುವಳಿಕೆಗಾಗಿ ಮಾದರಿಗಾಗಿ ಮಾತ್ರ ಐದು ಶುಭ ಯೋಗಗಳ ಉಲ್ಲೇಖಮಾಡಲಾಗಿದೆ.

## ೨) ಸಂತತೀಸೌಖ್ಯದ ಮಾರಕ ಯೋಗಗಳು :

೧) ರಾಹು, ಕೇತು ಪಂಚಮಸ್ಥಾನದಲ್ಲಿದ್ದರೆ ಸಂತತೀಸೌಖ್ಯಸಿಗುವುದಿಲ್ಲ ಅದರಲ್ಲಿಯೂ ರಾಹು ಪಂಚಮದಲ್ಲಿದ್ದರೆ ಗರ್ಭಬೆಳವಣಿಗೆಗೆ ಮಾರಕವು.

೨) ಶನಿ–ಮಂಗಳ, ಶನಿ–ರವಿ. ಶನಿ–ಚಂದ್ರ, ಶನಿ–ರಾಹು, ರವಿ–ಕೇತು ರಾಹು–ಚಂದ್ರ ಈ ಗ್ರಹಗಳಯುತಿಯೋಗ ಪ್ರತಿಯೋಗವು ಪಂಚಮ ಲಾಭ ಈ ಯಾವುದೊಂದು ಸ್ಥಾನದ್ದರೆ ಸಂತತೀಸೌಖ್ಯ ಸಿಗುವುದಿಲ್ಲ.

೩) ಪಂಚಮಸ್ಥಾನ ದೂಷಿತವಿದ್ದು, ಪಂಚಮೇಶನು ದುರ್ಬಲ, ನಿರ್ಬಲನಿದ್ದರೆ ಸಂತತೀಸೌಖ್ಯ ಸಿಗುವುದಿಲ್ಲ.

೪) ಪಂಚಮದಲ್ಲಿ ಯಾವುದೇ ಗ್ರಹವಿರದೇ ಶನಿದೃಷ್ಟಿತ, ರಾಹುದೃಷ್ಟಿತ ಪಂಚಮಸ್ಥಾನವಿದ್ದರೂ ಸಂತತೀಸೌಖ್ಯ ಸಿಗುವುದಿಲ್ಲ.

೫) ಗುರುವು ನೀಚರಾಶಿ,ಶತ್ರುಕ್ಷೇತ್ರ ಅಸ್ತಂಗತ, ವೃದ್ಧಾಪ್ಯ,ಬಾಲ್ಯಾವಸ್ಥೆ ಇದ್ದು,ಚತುರ್ಥ, ಷಷ್ಠ,ಅಷ್ಟ,ವ್ಯಯ ಈ ಸ್ಥಾನಗಳಲ್ಲಿದ್ದರೆ ಸಂತತೀ ಸೌಖ್ಯ ಸಿಗುವುದಿಲ್ಲ.

ಹೀಗೆ ಮೇಲೆ ಬರೆದ ಯೋಗಗಳಿದ್ದ ಜಾತಕನಿಗೆ ಜಾತಕಳಿಗೆ ಸಂತತೀ ಸೌಖ್ಯವಿರುವುದಿಲ್ಲ. ಆದುದರಿಂದ ಸಂತತೀಸೌಖ್ಯದ ಯೋಗಗಳ ಗುಣ ಮಾಪನ ಮಾಡುವಾಗ ಶೂನ್ಯ ಗುಣಗಳು ದೊರೆಯುವುದರಿಂದ ಈ ಅಂಶ ವನ್ನು ಗಮನಿಸಬೇಕು. ಇಂಥ ಅಶುಭ ಯೋಗಗಳು ಬಹಳ ಇವೆ. ಮಾದರಿ ಗಾಗಿ ಮಾತ್ರ ಇಲ್ಲಿ ಐದು ಯೋಗಗಳನ್ನು ಉಲ್ಲೇಖಿಸಲಾಗಿದೆ. ಇನ್ನೊಂದು ಮಹತ್ವದ ಅಂಶವೆಂದರೆ. ಸಂತತಿಸೌಖ್ಯವಿರುವುದಿಲ್ಲ ಅಂದರೆ ಆಜ್ಞಾಧಾರಕ ಮಗನಿರುವುದಿಲ್ಲ. ದುಶ್ಚಟಗಳಿಗೆ ಒಳಗಾದ ಮಗನಿರುತ್ತಾನೆ. ಅಂಗವಿಕಲ ಬುದ್ಧಿಮಾಂದ್ಯದ ಮಗನಿರುತ್ತಾನೆ.ಅಥವಾ ಅಪಮೃತ್ಯುಗೀಡಾಗುವ ಮಗನಿರ ಬಹುದು. ಮನೆಯಲ್ಲಿ ವಿಷಮವಾತಾವರಣ ನಿರ್ಮಿಸುವ ಮಗನಿರಬಹುದು. ವೃದ್ಧಾಪ್ಯದಲ್ಲಿ ತಂದೆ-ತಾಯಿಗಳನ್ನು ನಿರ್ಲಕ್ಷಿಸಬಹುದು. ತಂದೆ-ತಾಯಿ ಗಳಿಗೆ ಸಮಸ್ಯಾಪೂರಿತ ಮಗನಿರಬಹುದು. ಹೀಗೆ ಸಂತತಿಸೌಖ್ಯವಿಲ್ಲ ಎಂದರೆ ಅನೇಕ ಸಂಗತಿಗಳು ಒಳಗೊಂಡಿರುತ್ತವೆ.

ಸಂತತಿಸೌಖ್ಯದ ಗುಣಮಾಪನ ಮಾಡುವಾಗ ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲ, ಗುರುವಿನ ಬಲಾಬಲ, ಸಂತತಿ ಪೋಷಕ ಹಾಗೂ ಮಾರಕ ಯೋಗಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿ ಗುಣಮಾಪನ ಮಾಡಬೇಕು.



೮

# ಭಾಗ್ಯ

## ಗುಣಗಳು ೮

ಕುಂಡಲಿಗುಂಣ ನಿರ್ಣಯದಲ್ಲಿ ಭಾಗ್ಯದ ಪಾತ್ರ ಅರ್ಥಾತ್ ಭಾಗ್ಯ ಸ್ಥಾನದ ಪಾತ್ರ ಬಹಳಮಹತ್ವದ್ದಿದೆ. ಉದಾಹರಣೆಗೆ ಯಾರಿಬ್ಬರ ಶಕ್ತಿ ಸಾಮರ್ಥ್ಯ, ಬುದ್ಧಿಮತ್ತೆ ಸಮಂವಾಗಿದ್ದರೂ ಅವರಲ್ಲಿ ಒಬ್ಬನು ಅತ್ಯಂತ ಪ್ರಧಾನ ಹಾಗೂ ಮಹತ್ವದಸ್ಥಾನ ಪಡೆದರೆ ಇನ್ನೊಬ್ಬನು ಯಾವ ಸ್ಥಾನ ವನ್ನೂ ಪಡೆಯುವುದಿಲ್ಲ. ಇನ್ನೊಂದು ಉದಾಹರಣೆ ಒಂದೇ ತಂದೆ-ತಾಯಿ ಗಳ ಮನೆಯಲ್ಲಿ ಜನಿಸಿದ ಇಬ್ಬರುಸಹೋದರರಲ್ಲಿ ಒಬ್ಬನು ಬಹಳ ಶ್ರೀಮಂತ ನಿದ್ದರೆ ಇನ್ನೊಬ್ಬನು ಬಡವನಿರುತ್ತಾನೆ. ಒಬ್ಬನು ಹೆಚ್ಚಿನ ಶಿಕ್ಷಣ ಪಡೆದು ವಿದ್ಯಾವಂತ ಬುದ್ಧಿವಂತ ಪದವೀಧರನಾದರೆ, ಇನ್ನೊಬ್ಬನು ನಿರಕ್ಷರಿಯಿರು ತ್ತಾನೆ; ಮಂದಬುದ್ಧಿಯವನಿರುತ್ತಾನೆ. ಒಬ್ಬನು ಗುಮಾಸ್ತನಿದ್ದರೆ, ಇನ್ನೊಬ ಅಧಿಕಾರಿ ಇರುತ್ತಾನೆ. ಮತ್ತೊಂದು ಉದಾಹರಣೆ ನ್ಯಾಯಾಧೀಶ ಜಿಲ್ಲಾಧಿಕಾರಿ, ರಾಜ್ಯಪಾಲ, ರಾಷ್ಟ್ರಧ್ಯಕ್ಷ, ಪ್ರಧಾನ ಮಂತ್ರಿ, ಮುಖ್ಯ ಮಂತ್ರಿ, ಮಂತ್ರಿ, ಉದ್ಯೋಮದಾರ ವರಿಷ್ಠ ಅಧಿಕಾರಿ ಮೊದಲಾದ ಸಮಾಜದ ಗಣ್ಯವ್ಯಕ್ತಿಗಳ ಮನೆಯಲ್ಲಿ ಜನಿಸಿದರೂ ಕೂಡ ಅವರು ಅದೇ ಸ್ಥಾನ ವನ್ನು ಪಡೆಯುತ್ತಾರೆ ಎಂದು ಹೇಳಲು ಬಾರದು. ಇದಕ್ಕೆಲ್ಲ ಅವರವರ ದೈವವೇ ಕಾರಣವೆನ್ನಬಹುದು. ಯಾರು ಸ್ಥಾನಮಾನ ಅಧಿಕಾರ ಶಿಕ್ಷಣ ವರ್ಚಸ್ಸು ಪ್ರಭಾವ ಅಂತಸ್ತು ಪಡೆಯುವರೋ ಅವರಿಗೆ ಸುದೈವಿ ಎನ್ನ

ಬಹುದು. ಸುದೈವಿ ಅಂದರೆ ಭಾಗ್ಯವಂತ. ಇದರ ಅರ್ಥ ಅವಕಾಶ ಪಡೆದವ. ಅವಕಾಶಕ್ಕೆ ಪೂರಕವಾದ ಸ್ಥಾನವೆಂದರೆ ಭಾಗ್ಯಸ್ಥಾನ ಅರ್ಥಾತ್ ನವಮ ಸ್ಥಾನವು ದಶಮಸ್ಥಾನಕ್ಕೆ ಕರ್ಮಸ್ಥಾನವೆಂದರೆ ನವಮಸ್ಥಾನಕ್ಕೆ ಅರ್ಥಾತ್ ಭಾಗ್ಯಸ್ಥಾನಕ್ಕೆ ಧರ್ಮಸ್ಥಾನವೆನ್ನುತ್ತಾರೆ. ಧರ್ಮ ಸಿದ್ಧಾಂತದ ಪ್ರಕಾರ ಯಾರೊಬ್ಬರು ಪೂರ್ವಜನ್ಮದಲ್ಲಿ ಹಿಂದಿನ ಜನ್ಮದಲ್ಲಿ ಪಡೆದುಕೊಂಡ ಭಾಗ್ಯವನ್ನು ಈ ಜನ್ಮದಲ್ಲಿ ಅನುಭವಿಸುವರು. ಆಡುಭಾಷೆಯಲ್ಲಿಹೇಳಬೇಕೆಂದರೆ ಹಿಂದಿನಜನ್ಮದ ಪುಣ್ಯ ಮಾಡಿಕೊಂಡು ಬಂದವ, ಪಡೆಕೊಂಡುಬಂದವ ಎನ್ನುತ್ತಾರೆ. ಯಾರೊಬ್ಬರು ಈ ಜನ್ಮದಲ್ಲಿ ಅನುಭವಿಸುತ್ತಿರುವ ವಿವಿಧ ಸಂಗತಿಗಳು ಸುಖ ದುಃಖಗಳಲ್ಲಿ ಅವರವರು ಪಡದುಕೊಂಡ ಭಾಗ್ಯವು ಈ ಎಲ್ಲ ಸಂಗತಿಗಳು ಭಾಗ್ಯಸ್ಥಾನದ ಮೇಲಿಂದ ವ್ಯಕ್ತವಾಗುತ್ತವೆ.

ಜಾತಕದ ಭಾಗ್ಯಸ್ಥಾನದ ಮೇಲಿಂದ (ನವಮಸ್ಥಾನದ ಮೇಲಿಂದ) ಭಾಗ್ಯೋದಯಕಾಲ, ಧರ್ಮ, ಅಧರ್ಮ, ಆಚಾರ, ವಿಚಾರ, ಶ್ರದ್ಧಾ ಕೀರ್ತಿ ದೂರದ ಪ್ರವಾಸ ವಿದೇಶಯಾತ್ರೆ ತೀರ್ಥಯಾತ್ರಾ ಸಂದರ್ಶನ, ಜನಪ್ರಿಯತೆ. ಜನನಿಂದೆ, ನೀತಿ, ಅನೀತಿ, ಅಧ್ಯಾತ್ಮ, ತತ್ವಜ್ಞಾನ ಧರ್ಮವಂತ ಧರ್ಮಲಂಡ, ಸ್ಪರ್ಧಾತ್ಮಕ ಪರೀಕ್ಷೆ ಯಲ್ಲಿಯಶ ಗುರುಕೃಪೆ, ಹೆಚ್ಚಿನ ಶಿಕ್ಷಣ ಪಡೆಯುವ ಯೋಗ ಅವಕಾಶ ಸೌಲಭ್ಯ ಪಡೆಯುವಿಕೆ ಇವೇಮೊದಲಾದ ಸಂಗತಿಗಳು ಭಾಗ್ಯಸ್ಥಾನದ ಮೇಲಿಂದ ತಿಳಿಯುತ್ತವೆ. ಆದುದರಿಂದ ಕುಂಡಲಿಗುಣ ನಿರ್ಣಯದಲ್ಲಿ ಯಾರೊಬ್ಬರ ಭಾಗ್ಯದ ವಿಷಯವಾಗಿ ಗುಣ ಮಾಪನಹೇಗೆ ಮಾಡಬೇಕೆಂಬುದನ್ನು ಪರಿಶೀಲಿಸುವಾ

ಯಾರೊಬ್ಬರ ಭಾಗ್ಯದ ವಿಷಯವಾಗಿ ತಿಳಿದುಕೊಳ್ಳಲು ಮೂರು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. (೧) ಭಾಗ್ಯೇಶನಬಲಾಬಲ (೨) ಭಾಗ್ಯಸ್ಥಾನದಲ್ಲಿಯ ಗ್ರಹಗಳ ಬಲಾಬಲ (೩) ಭಾಗ್ಯಕ್ಕೆ ಪೂರಕವಾದ ಯೋಗಗಳು ಈ ಮೂರು ಸಂಗತಿಗಳು ಪೂರಕವಾಗಿದ್ದರೆ ೮ ಗುಣಗಳಿಗೆ ೮ ಗುಣಗಳು ಲಭಿಸುತ್ತವೆ. ಮೂರು ಸಂಗತಿಗಳು ಪ್ರತಿಕೂಲವಾಗಿದ್ದರೆ ಶೂನ್ಯಗುಣಗಳು. ಅವುಗಳಲ್ಲಿ ೧–೨ ಸಂಗತಿಗಳು ಪ್ರತಿಕೂಲವಿದ್ದರೆ ಅಷ್ಟು ಗುಣಗಳು ಕಡಿಮೆ ಬರುವವು. ಇದರಲ್ಲಿ ಭಾಗ್ಯೇಶನ ಬಲಾಬಲಕ್ಕೆ ೪ ಗುಣ

ಗಳನ್ನು, ಭಾಗ್ಯದಲ್ಲಿರುವ ಗ್ರಹಕ್ಕೆ ಗ್ರಹಗಳಿಗೆ ೨ ಗುಣಗಳನ್ನು, ಭಾಗ್ಯ ಪೋಷಕ ಯೋಗಗಳಿಗೆ ೨ ಗುಣಗಳನ್ನು ನಿರ್ಧರಿಸಲಾಗದ್ದು ಅವುಗಳ ವಿವರಣೆ ಹೀಗಿದೆ.

೧) ಭಾಗ್ಯೇಶನ ಮೇಲಿಂದ :

ಯಾವುದೇ ಗ್ರಹವು ಭಾಗ್ಯೇಶನಾಗಿ ಭಾಗ್ಯದಲ್ಲಿದ್ದರೆ ಆ ಜಾತಕನು ಸುದೈವಿ ಇರುತ್ತಾನೆ. ಆದುದರಿಂದ ೪ ಗುಣಗಳಿಗೆ ೪ ಗುಣಗಳು ಲಭಿಸುತ್ತವೆ. ಇದಲ್ಲದೇ ಯಾವುದೇ ಗ್ರಹವು ಭಾಗ್ಯೇಶನಾಗಿ ಬಲಾಢ್ಯನಿದ್ದರೆ ಅಂದರೆ ಸ್ಥಾನಬಲದವನೂ ಯೋಗಕಾರಕನೂ ರಾಶಿಬಲದವನು ಹಿಗಿದ್ದರೂ ಕೂಡ ೪ ಗುಣಗಳಿಗೆ ೪ ಗುಣಗಳು ಲಭಿಸುತ್ತವೆ. ಭಾಗ್ಯೇಶನು ಕೇವಲ ರಾಶಿಬಲದವನಾಗಿದ್ದು ಸ್ಥಾನಬಲದವನಿಲ್ಲದಿದ್ದರೆ ೨ ಗುಣಗಳು ಮಾತ್ರ ಲಭಿಸುತ್ತದೆ. ಇದರಂತೆ ಕೇವಲ ಸ್ಥಾನಬಲದವನಿದ್ದು, ರಾಶಿಬಲದವನಿಲ್ಲದಿದ್ದರೂ ಕೂಡ ೨ ಗುಣಗಳು ಲಭಿಸುವವು. ಭಾಗ್ಯೇಶನು ನಿರ್ಬಲನೂ ದುರ್ಬಲದೂ ಇದ್ದರೆ ಶೂನ್ಯಗುಣಗಳು ದೊರೆಯುತ್ತವೆ.

ಭಾಗ್ಯೇಶನು ಬಲಾಢ್ಯನಾಗಿದ್ದರೆ ಜಾತಕನು ಸುದೈವಿ ಎನೋ ನಿಜ ಆದರೆ ಯಾವಗ್ರಹವು ಭಾಗ್ಯೇಶನದಾಗಿರುವುದೋ ಆ ಗ್ರಹದ ಗುಣಧರ್ಮದಂತೆ ಭಾಗ್ಯ ಸಿಗುತ್ತದೆ. ರವಿಯು ಭಾಗ್ಯೇಶನಾಗಿ ಬಲಾಢ್ಯನಿದ್ದರೆ ಜಾತಕನು ಧಾರ್ಮಿಕವೃತ್ತಿಯುವನಿದ್ದು, ಸರಕಾರದಲ್ಲಿ ರಾಜಕೀಯದಲ್ಲಿ ಸ್ಥಾನಮಾನ ಅಧಿಕಾರ ಪಡೆಯುವನು. ಅಲ್ಲದೇ ಇವರು ಮನೋಧಾರ್ಢ್ಯದವರೂ ಮನೋಬಲದವರೂ ಕರ್ತಬಗಾರರು ಇರುತ್ತಾರೆ. ಅಲ್ಲದೇ ಇವರಿಗೆ ಪಿತೃಸುಖ ಚನ್ನಾಗಿರುತ್ತದೆ. ದೇಹಧಾಡ್ಯ್ರಕೂಡ ಚನ್ನಾಗಿರುತ್ತದೆ. ಚಂಚಲ ಸ್ವಭಾವದ ಚಂದ್ರನು ಭಾಗ್ಯೇಶನಾಗಿ ಬಲಾಢ್ಯನಿದ್ದರೆ ಧರ್ಮದ ವಿಷಯವಾಗಿ ಶ್ರದ್ಧೆ ಕಡಿಮೆ. ಲೌಕಿಕ ಅಪೇಕ್ಷಿತಸೌಖ್ಯ ಸಿಗುತ್ತದೆ. ಮಾತೃಸೌಖ್ಯ ಸ್ತ್ರೀಸೌಖ್ಯ ವಾಹನ. ಮನೆ ಸೌಖ್ಯ ಸಿಗುತ್ತದೆ. ಮಂಗಳನು ಭಾಗ್ಯೇಶನಾಗಿ ಬಲಾಢ್ಯನಿದ್ದರೆ ಧಾರ್ಮಿಕಶ್ರದ್ಧೆ ಇರುವುದೇಇಲ್ಲ. ದರ್ಪದ ಹಟಮಾರಿ ಸ್ವಭಾವ. ಇವರು ಸ್ವತಂತ್ರ ವಿಚಾರದವರು. ನಿಷ್ಠುರರೂ ಇರುವರಲ್ಲದೆ ಸ್ವತಂತ್ರ ಉದ್ಯೋಗ, ವೃತ್ತಿಯನ್ನೇ ಬಯಸುತ್ತಾರೆ. ಬುಧನು ಭಾಗ್ಯೇಶನಾಗಿ

ಬಲಾಢ್ಯನಾಗಿದ್ದರೆ ಆರ್ಥಿಕವಿಷಯದಲ್ಲಿಯೂ ವ್ಯಾಪಾರದಲ್ಲಿಯೂ ಲೇಖನ ವ್ಯವಸಾಯದಲ್ಲಿಯೂ ಮಾತುಗಾರಿಕೆಯಲ್ಲಿಯೂ ನಿಷ್ಣಾತರು. ವ್ಯವಹಾರಕ್ಕೆ ಪೂರಕವಾಗುವಷ್ಟು ಧರ್ಮ ಶ್ರದ್ಧೆ ಇರುತ್ತದೆ. ಗುರುವು ಭಾಗ್ಯೇಶನಾಗಿ ಬಲಾಢ್ಯನಿದ್ದರೆ ಅಧ್ಯಾತ್ಮ, ತತ್ವಜ್ಞಾನ, ಧಾರ್ಮಿಕ ವಿಷಯದಲ್ಲಿ ಆಸಕ್ತಿ ಬಹಳ. ತೀರ್ಥಯಾತ್ರೆ ಸಂದರ್ಶನ ಬಹಳ ವಿದ್ಯಾ ಬುದ್ಧಿ ಜ್ಞಾನ ಶಿಕ್ಷಣದಲ್ಲಿ ತಜ್ಞರು. ಸಂಶೋಧನೆಮಾಡಿ ಇಲ್ಲವೆ ಗೌರವ ಡಾಕ್ಟರೇಟ ಸಹಪಡೆಯುವರು. ಶಿಕ್ಷಕ, ಅಧ್ಯಾಪಕ, ನ್ಯಾಯಾಧೀಶ, ಮಠಾಧೀಶ, ಸಲಹೆಗಾರಿಕೆ ಉದ್ಯೋಗಸ್ಥರು. ಶುಕ್ರನು ಭಾಗ್ಯೇಶನಾಗಿ ಬಲಾಢ್ಯನಿದ್ದರೆ ಪಾಪ-ಪುಣ್ಯಗಳಲ್ಲಿ ಭೇದವಾಡ ಲಾರರು. ಧಾರ್ಮಿಕ ಶ್ರದ್ಧೆ ಕಡಿಮೆ. ಲಲಿತ ಕಲೆಗಳಲ್ಲಿ ನಿಷ್ಣಾತರು. ವೈಭವಶಾಲೀ ಜೀವನನಡೆಸುವರು ಐಹಿಕ ಲೌಕಿಕಸೌಖ್ಯ ಬಹಳ ಸ್ತ್ರೀಸೌಖ್ಯ ಬಹಳ. ಶನಿಯು ಭಾಗ್ಯೇಶನಾಗಿ ಬಲಾಢ್ಯ ನಿದ್ದರೆ ಹಳೇವಿಚಾರದವರು ಅಧ್ಯಾತ್ಮ ಹಾಗೂ ತತ್ವಜ್ಞಾನದಲ್ಲಿ ಆಸಕ್ತಿ ಬಹಳ. ಕಾರ್ಯದಲ್ಲಿ ನಿಷ್ಣಾತರು.

### ೨) ಭಾಗ್ಯ ಸ್ಥಾನದಲ್ಲಿರುವ ಗ್ರಹಗಳು ಮೇಲಿಂದ :

ಯಾವುದೇ ಗ್ರಹವು ಬಲಾಢ್ಯವಾಗಿ ಭಾಗ್ಯಸ್ಥಾನದಲ್ಲಿದ್ದರೆ ಅಂದರೆ ಸ್ವರಾಶಿ ಮಿತ್ರಕ್ಷೇತ್ರಿ ಉಚ್ಚರಾಶಿಯಂಪರಾಗಿದ್ದರೆ ೨ ಗುಣಗಳಿಗೆ ೨ಗುಣಗಳು ಲಭಿಸುವವು. ಆದರೆ ಅದೇ ಗ್ರಹವು ದುರ್ಬಲ, ನಿರ್ಬಲ, ಶತ್ರುಕ್ಷೇತ್ರಿ, ಶತ್ರುವಾಧ್ಯ ನೀಚ,ಅಸ್ತಂಗತ, ವೃದ್ಧಾಪ್ಯ, ಬಾಲ್ಯವಸ್ಥೆಯಲ್ಲಿ ಹೀಗೆ ದುರ್ಬಲ ವಿದ್ದರ ಶೂನ್ಯಗುಣ ಲಭಿಸುತ್ತದೆ.

ಭಾಗ್ಯಸ್ಥಾನಲ್ಲಿ ಬಲಾಢ್ಯ ಗ್ರಹವಿದ್ದರೆ ಭಾಗ್ಯವಂತನೆನೋ ನಿಜ. ಆದರೆ ಯಾವಗ್ರಹವು ಭಾಗ್ಯ ಸ್ಥಾನದಲ್ಲಿರುವುದೋ ಆಯಾಗ್ರಹದ ನೈಸರ್ಗಿಕ ಗುಣ ಧರ್ಮದಂತೆ ಭಾಗ್ಯವೃದ್ಧಿಯಾಗುತ್ತದೆ. ರವಿಯು ಬಲಾಢ್ಯನಾಗಿ ಭಾಗ್ಯ ದಲ್ಲಿದ್ದರೆ ದೂರದ ಪ್ರವಾಸ ವಿದೇಶಿ ಯಾತ್ರೆ,ಪಿತೃಸೌಖ್ಯ, ಪರಿಪ್ಪ ಅಧಿಕಾರ, ರಾಜಕೀಯ ಸಾಮಾಜಿಕ ಕ್ಷೇತ್ರದಲ್ಲಿ ಸ್ಥಾನಮಾನ ಅಧಿಕಾರ ಪಡೆಯುವಿಕೆ, ಉದ್ಯೋಗದಲ್ಲಿ, ವೃತ್ತಿಯಲ್ಲಿ, ನೌಕರಿಯಲ್ಲಿ ಗಣ್ಯ ವ್ಯಕ್ತಿಗಳಾಗುವಿಕೆ, ಕೀರ್ತಿ ಕಾರಕ. ಅಲ್ಲದೇ ವಯಸ್ಸಿನ ೨೨ನೇ ವರುಷದಲ್ಲಿ ಭಾಗ್ಯವೃದ್ಧಿಯಾಗುತ್ತದೆ. ಚಂದ್ರನು ಬಲಾಢ್ಯನಾಗಿ ಭಾಗ್ಯಸ್ಥಾನದಲ್ಲಿದ್ದರೆ. ಸತತ ಪ್ರವಾಸ, ಮಾತೃ

ಸೌಖ್ಯ, ಸ್ತ್ರೀಸೌಖ್ಯ, ಸಹೋದರೀಯರ ಸೌಖ್ಯ,ಸ್ನಾವರ ಇಷ್ಟೇಟ ಸಂಪಾದನೆ, ಕೀರ್ತಿಕಾರಕ ಪ್ರವಾಹಿ ಹಾಗೂ ನೀರಿನ ಸಂಬಂಧಿಸಿದ ವೃತ್ತಿಯವ, ಪರದೇಶಪ್ರವಾಸ ತೀರ್ಥಯಾತ್ರಾ ಸಂದರ್ಶನ. ಅಲ್ಲದೇ ವಯಸ್ಸಿನ ೨೪ನೇ ವರುಷದಲ್ಲಿ ಭಾಗ್ಯವೃದ್ಧಿಯಾಗುತ್ತದೆ. ಮಂಗಳನು ಬಲಾಢ್ಯನಾಗಿ ಭಾಗ್ಯ ಸ್ಥಾನದಲ್ಲಿದ್ದರೆ ಇವರು ಧಾರ್ಮಿಕವಿಚಾರದಲ್ಲಿ ಆಸಕ್ತಿ ಕಡಿಮೆ. ಆದರೆ ಸಹೋದರಸೌಖ್ಯವಿರುತ್ತದೆ. ಮಿಲಟರಿ, ನೇವ್ಹಿ, ಎಅರಫೋರ್ಸ ಪೋಲಿಸ ಆಬಕಾರಿ ಅರಣ್ಯ ಲೋಕೋಪಯೋಗಿ ಮೊದಲಾದ ಓಡಾಡಿ ಕೆಲಸಮಾಡುವ ಖಾತೆಗಳಲ್ಲಿ ಅಧಿಕಾರಿ. ಇವರು ಹೆಚ್ಚಾಗಿ ಸ್ವತಂತ್ರ ವೃತ್ತಿಯುಳ್ಳವರು. ಹಾಗೂ ವಯಸ್ಸಿನ ೨೮ರಲ್ಲಿ ಭಾಗ್ಯ ವೃದ್ಧಿಯಾಗುತ್ತದೆ. ಬುಧನು ಬಲಾಢ್ಯನಾಗಿ ಭಾಗ್ಯದಲ್ಲಿದ್ದರೆ ಶಿಕ್ಷಣದಲ್ಲಿ, ವಿದ್ಯೆಯಲ್ಲಿ, ಭಾಷೆಯಲ್ಲಿ, ಲೇಖನ ಮಾತುಗಾರಿಕೆಯಲ್ಲಿ ಪ್ರಭುತ್ವ ಪಡೆಯುವರು, ಇವರು ಬಹಳ ಚಿಕ್ಕ ವಯಸ್ಸಿನಲ್ಲಿ ಉದ್ಯೋಗ, ವೃತ್ತಿ, ನೌಕರಿ ಕೈಕೊಂಡು ಹಣ ಸಂಪಾದಿಸುವರು ಹಾಗೂ ಹಣಕಾಸಿನ ವಿಷಯ ಹಾಗೂ ವಾಣಿಜ್ಯ ವ್ಯವಹಾರದಲ್ಲಿ ತಜ್ಞರಿರುತ್ತಾರೆ, ಧರ್ಮ, ಅಧರ್ಮ, ನೀತಿ, ಅನೀತಿಗಳನ್ನು ವಿಚಾರಿಸದೆ ಪರಿಸ್ಥಿತಿಗಳನುಗುಣವಾಗಿ ವರ್ತಿಸುವರು. ಆದರೆ ಮಾತಿನಲ್ಲಿ ಮಧುತಿಷ್ಕತಿಯುಳ್ಳವರು ಆದರೆ ವಯಸ್ಸಿನ ೩೨ ರಲ್ಲಿ ಇವರ ಭಾಗ್ಯವೃದ್ಧಿಯಾಗುತ್ತದೆ. ಗುರುವು ಭಾಗ್ಯಸ್ಥಾನದಲ್ಲಿ ಬಲಾಢ್ಯನಾಗಿದ್ದರೆ, ಬಹಳ ಧಾರ್ಮಿಕ ಪ್ರವೃತ್ತಿಯುವರು ಅಧ್ಯಾತ್ಮ ಹಾಗೂ ತತ್ವಜ್ಞಾನದಲ್ಲಿ ತಜ್ಞರಿರುತ್ತಾರೆ, ಶಿಕ್ಷಣ, ವಿದ್ಯೆ, ಜ್ಞಾನದಲ್ಲಿ ಪಾಂಡಿತ್ಯವುಳ್ಳವರು. ತೀರ್ಥಯಾತ್ರಾ ಸಂದರ್ಶನ, ವಿದೇಶ ಯಾತ್ರೆ ಕೈಕೊಳ್ಳವರು. ಭಾಗ್ಯದಲ್ಲಿ ಗುರುವಿದ್ದ ಜಾತಕನನ್ನು ಸಮಾಜದಲ್ಲಿ ಹಾಗೂ ಕುಟುಂಬದಲ್ಲಿ ಗೌರವದಿಂದ ಕಾಣುತ್ತಾರೆ. ಅನೇಕ ವಿಷಯಗಳಲ್ಲಿ ಅವರ ಸಲಹೆ ಪಡೆಯಲು ಜನರು ಗುಂಪುಗುಂಪಾಗಿ ಧಾವಿಸುತ್ತಾರೆ. ಅವರ ಶಿಷ್ಯವರ್ಗ ಅಪಾರ. ಗುರುವೆಂದು ಹೆಚ್ಚಾಗಿ ಸಂಭೋಧಿಸುತ್ತಾರೆ. ಇವರ ವಿವಾಹವು ಕೂಡ ಚಿಕ್ಕ ವಯಸ್ಸಿನಲ್ಲಿ ಜರುಗುತ್ತದೆ. ಬಹಳ ಚಿಕ್ಕ ವಯಸ್ಸಿನಲ್ಲಿ ಅಂದರೆ ೧೬ನೇ ವರುಷಕ್ಕೆ ಇವರ ಭಾಗ್ಯೋದಯವಾಗುತ್ತದೆ. ಶುಕ್ರನು ಬಲಾಢ್ಯನಾಗಿ ಭಾಗ್ಯಸ್ಥಾನದಲ್ಲಿದ್ದರೆ ಉತ್ತಮ ಜಾತಕವು.ವೇದಾಂತದಲ್ಲಿ ಆಸಕ್ತಿ ಕಡಿಮೆ.ಹಣಕಾಸಿನ ವಿಷಯದಲ್ಲಿ ಉತ್ತಮ

ಇವರದು. ವಿಲಾಸೀ ಹಾಗೂ ವೈಭವಪೂರ್ಣಜೀವನ. ಅವರಬಹಳ ಚಿಕ್ಕ ವಯಸ್ಸಿನಲ್ಲಿ ಅಂದರೆ ಇನ್ನು ಚಿಣವಿಪದಲ್ಲಿ ಅಂದರೆ ೧೩ ರಿಂದ ೧೯ರ ಒಳಗೆ ಹಣಗಳಿಸುವರು. ಹಾಗೂ ವಿಲಾಸಕ್ಕೆ ಹಣ ಖರ್ಚು ಮಾಡುವರು. ಹಣ ಗಳಿಸುವರು ಅನ್ನುವುದಕ್ಕಿಂತ ಹಣಬರುತ್ತದೆ. ಇವರಿಗೆ ಸ್ತ್ರೀಸೌಖ್ಯ ಬಹಳ. ಆಸ್ತಿ, ವಾಹನ, ಮನೆ ಬೆಲೆಯುಳ್ಳವಸ್ತು ಒಡವೆಗಳನ್ನು ಸಂಪಾದಿಸುವರು. ಹಾಗೂ ದೊರಕುತ್ತವೆ. ಇವರು ಎಂಥ ಪ್ರಸಂಗದಲ್ಲಿಯೂ ನಗನಗುತ್ತಾ ಆನಂದಮಯ ಜೀವನಸಾಗಿಸುತ್ತಾರೆ ಹಾಗೂ ಇವರು ವಯಸ್ಸಿನ ೨೫ರಲ್ಲಿ ಭಾಗ್ಯೋದಯವಾಗುತ್ತದೆ. ಶನಿಯು ಬಲಾಢ್ಯನಾಗಿ ನವಮದಲ್ಲಿದ್ದರೆ ವೇದಾಂತ ಹಾಗೂ ತತ್ವಜ್ಞಾನದಲ್ಲಿ ಆಸಕ್ತಿಉಳ್ಳವರು. ಆದರೆ ಇವರ ತಮ್ಮ ಪರಿಶ್ರಮದಿಂದ ಮುಂದೆ ಬರುತ್ತಾರೆ. (Selfmade) ಕಾಯದೆ ಕಾನೂನು ದಲ್ಲಿ ಪಳಗಿದವರು. ಸಂಘಸಂಸ್ಥೆಗಳ ಅದರಲ್ಲಿಯೂ ಕೂಲಿಕಾರರ ವರ್ಗದ ವರ ದೀನದಲಿತ ವರ್ಗದವರ ಧುರೀಣರು. ಯುನಿಯನ್ನಿನ ಅಧ್ಯಕ್ಷ ಕಾರ್ಯದರ್ಶಿಯಾಗಿ ಪ್ರಮುಖ ವ್ಯಕ್ತಿಗಳು ಮಾರ್ಗದರ್ಶಿಗಳಾಗಿರುತ್ತಾರೆ. ಇವರ ವಯಸ್ಸಿನ ೩೬ರಲ್ಲಿ ಭಾಗ್ಯವೃದ್ಧಿಯಾಗುತ್ತದೆ. ರಾಹು-ಕೇತುಗಳು ಬಲಾಢ್ಯರಾಗಿ ಭಾಗ್ಯಸ್ಥಾನದಲ್ಲಿದ್ದರೆ ಮಂಗಳನ ಗುಣಧರ್ಮದಂತೆ ರಾಹು ವಿನದೂ ಶನಿಯ ಗುಣಧರ್ಮದಂತೆ ಕೇತುವಿನ ಫಲ ದೊರೆಯುತ್ತದೆ.

ಭಾಗ್ಯಸ್ಥಾನದಲ್ಲಿರುವ ಗ್ರಹದ ಹಾಗೂ ಗ್ರಹಗಳ ಗುಣಮಾಪನ ಮಾಡುವಾಗ ಒಂದು ಮಹತ್ವದ ವಿಷಯನ್ನು ನೆನಪಿನಲ್ಲಿಡಬೇಕು. ಇದು ಏನೆಂದರೆ ಭಾಗ್ಯದಲ್ಲಿರುವ ಗ್ರಹ ಹಾಗೂ ಗ್ರಹಗಳು ಯಾವಭಾವದ ಕಾರಕರೂ ಸ್ಥಾನಾಧೀಶರಿರುತ್ತಾರೆ ಎಂಬುದನ್ನು ಮೊದಲು ತಿಳಿದುಕೊಂಡು ಆ ಬಳಿಕ ಗುಣ ಮಾಪನಮಾಡಬೇಕು. ಉದಾಹರಣೆಗೆ ಮೇಷಲಗ್ನದ ಭಾಗ್ಯದಲ್ಲಿ ರವಿ ಇದ್ದರೆ ಅವನು ಪಂಚಮಸ್ಥಾನದ ವಿಷಯಗಳ ಭಾವದ ಫಲವನ್ನು ಕೊಡು ತ್ತಾನೆ. ಆದರೆ ಅದೇ ರವಿಯು ವೃಷಭ ಲಗ್ನದ ಭಾಗ್ಯದಲ್ಲಿದ್ದರೆ ಚತುರ್ಥ ಸ್ಥಾನದ ಭಾಗ್ಯದ ಫಲವನ್ನು ಕೊಡುತ್ತಾನೆ. ಹೀಗೆ ಭಾಗ್ಯಸ್ಥಾನದಲ್ಲಿರುವ ವಿಭಿನ್ನ ಗ್ರಹಗಳು ವಿಭಿನ್ನ ಲಗ್ನಗಳಿಗೆ ವಿಭಿನ್ನ ಫಲಗಳನ್ನು ಕೊಡುತ್ತವೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಗುಣಮಾಪನ ಮಾಡಬೇಕು.

## ೩) ಭಾಗ್ಯ ಪೋಷಕ ಹಾಗೂ ಮಾರಕಯೋಗಗಳು :

ಭಾಗ್ಯ ಪೋಷಕ ಯೋಗಗಳಿದ್ದರೆ ೨ ಗುಣಗಳಿಗೆ ೨ ಗುಣಗಳು ಲಭಿಸುತ್ತವೆ. ಭಾಗ್ಯಮಾರಕ ಯೋಗಗಳಿದ್ದರೆ ಶೂನ್ಯ ಗುಣಗಳು ಲಭಿಸುತ್ತವೆ. ಮಾದರಿಗಾಗಿ ಮಾತ್ರ ಇಲ್ಲಿ ಕೆಲ ಯೋಗಗಳ ವಿಚಾರ ಮಾಡಲಾಗಿದೆ.

### ಭಾಗ್ಯ ಪೋಷಕ ಯೋಗಗಳು

೧) ಯಾವುದೇ ಗ್ರಹವು ಭಾಗ್ಯೇಶನಾಗಿ ಭಾಗ್ಯದಲ್ಲಿದ್ದರೆ ಶುಭವು

೨) ಬಲಾಢ್ಯ ಗುರುವಿನ ಶುಭದೃಷ್ಟಿಯು ಭಾಗ್ಯಸ್ಥಾನದ ಮೇಲೆ ಇಲ್ಲವೆ ಭಾಗ್ಯೇಶನ ಮೇಲೆ ಇದ್ದರೆ ಶುಭವು.

೩) ಭಾಗ್ಯೇಶ ಇಲ್ಲವೆ ಭಾಗ್ಯಸ್ಥಾನದಲ್ಲಿರುವ ಗ್ರಹದಲ್ಲಿ ಯಾವುದೊಂದು ಗ್ರಹ ಬಲಾಢ್ಯವಿದ್ದರೂ ಕೂಡ ಶುಭ ಫಲವು. ಇಬ್ಬರು ಬಲಾಢ್ಯರಿದ್ದರೆ ಹೆಚ್ಚು ಶುಭವು.

೪) ಗುರುವು ಬಲಾಢ್ಯನಾಗಿ ಲಗ್ನ, ತೃತೀಯ, ಪಂಚಮ, ಭಾಗ್ಯದಲ್ಲಿದ್ದರೆ. ಶುಭವು.

೫) ತೃತೀಯಸ್ಥಾನದಲ್ಲಿರುವ ಬಲಾಢ್ಯ ಗ್ರಹ ಹಾಗೂ ಭಾಗ್ಯದಲ್ಲಿರುವ ಗ್ರಹ ಅಥವಾ ತೃತೀಯದಲ್ಲಿರುವ ಬಲಾಢ್ಯ ಗ್ರಹ ಹಾಗೂ ಭಾಗ್ಯೇಶನ ಗ್ರಹ ಮೈತ್ರಿ ಇದ್ದರೆ ಶುಭವು.

ಹೀಗೆ ಮೇಲೆ ಬರೆದ ಭಾಗ್ಯಪೋಷಕ ಯೋಗಳಿದ್ದರೆ ಭಾಗ್ಯವೃದ್ಧಿಯಾಗುತ್ತದೆ. ಆದುದರಿಂದ ೨ ಗುಣಗಳಿಗೆ ೨ ಗುಣಗಳು ಬರುತ್ತವೆ. ಇಂಥ ಅನೇಕ ಯೋಗಗಳಿದ್ದು ಮಾದರಿಗಾಗಿ ಮಾತ್ರ ೫ ಯೋಗಗಳ ಉಲ್ಲೇಖ ಮಾಡಲಾಗಿದೆ.

## ೨) ಭಾಗ್ಯ ಮಾರಕ ಯೋಗಗಳು :

೧) ಭಾಗ್ಯೇಶನು ನಿರ್ಬಲ ದುರ್ಬಲನಿದ್ದರೆ

೨) ಭಾಗ್ಯದಲ್ಲಿರುವ ಗ್ರಹ ಅಸ್ತ, ವಕ್ರೀ, ಶತ್ರು ಕ್ಷೇತ್ರಿ, ವೃದ್ಧಾವ್ಯ, ಬಾಲ್ಯಾವಸ್ಥೆ ಹೀಗಿದ್ದರೆ

೩) ಭಾಗ್ಯೇಶನು ಅಷ್ಟಮ, ಷಷ್ಟ, ವ್ಯಯ ಈ ಯಾವುದೊಂದು ಸ್ಥಾನದಲ್ಲಿದ್ದರೆ
೪) ಶನಿ–ಮಂಗಳ, ಶನಿ–ರವಿ, ಶನಿ–ಚಂದ್ರ, ರಾಹು–ಚಂದ್ರ, ರವಿ–ಕೇತು ಈ ಜೋಡಿಗಳ ಯುತಿಯೋಗವಾಗಲೀ ಪ್ರತಿಯೋಗವಾಗಲಿ ಲಗ್ನ, ಭಾಗ್ಯ, ಚತುರ್ಥ, ಪಂಚಮ, ದಶಮ, ತೃತೀಯದಲ್ಲಿದ್ದರೆ

ಹೀಗೆ ಮೇಲೆ ಬರೆದ ಭಾಗ್ಯ ಮಾರಕ ಯೋಗಗಳಿದ್ದರೆ ಶೂನ್ಯಗುಣಗಳು ಲಭಿಸುತ್ತವೆ. ಇಂಥ ಅನೇಕ ಭಾಗ್ಯ ಮಾರಕ ಯೋಗಗಳಿದ್ದು ಮಾದರಿಗಾಗಿ ಮಾತ್ರ ನಾಲ್ಕು ಯೋಗಗಳ ಉಲ್ಲೇಖಮಾಡಲಾಗಿದೆ.



# ಶತ್ರು – ಮಿತ್ರ, ಸಹೋದರ – ಸಹೋದರಿಯರಸೌಖ್ಯ

## ಗುಣಗಳು ೮

ಕುಂಡಲಿ ಗುಣನಿರ್ಣಯಂದಲ್ಲಿ ಇನ್ನೊಂದು ಮಹತ್ವದ ಅಂಶವೆಂದರೆ ಶತ್ರು – ಮಿತ್ರ ಸಹೋದರ — ಸಹೋದರಿಯರ ಸೌಖ್ಯದ ವಿಷಯುವಾಗಿ A friend in need is a friend in deed ಎಂಬ ಆಂಗ್ಲ ನಾಣ್ನುಡಿ ಜನಪ್ರಿಯುವಿದೆ. ಅಂದರ ಆಪತ್ತಿಗೆ, ಆಸರಕ್ಕೆ ಬಂದವನೇ ನಿಜವಾದ ಮಿತ್ರ, ಎಂಬುದೇ ಇದರ ಮತಿತಾರ್ಥವು. ಇದು ನಿಜವೂ ಹೌದು. ಏಕೆಂದರೆ ಯಾರೊಬ್ಬರಿಗೆ ಒಳ್ಳೆಯ ಸ್ನೇಹಿತ ನಿರುವುದು ನಿಜವಾದ ಆಸ್ತಿಇದ್ದಂತೆ. ಇದರ ತದ್ವಿರುದ್ಧವಾಗಿ ಒಬ್ಬ ಶತ್ರು ಒಬ್ಬನ ಜೀವನವನ್ನೇ ಹಾಳುಮಾಡಬಲ್ಲ. ಇದರಂತೆ ಸಹೋದರ ಸಹೋದರೀಯರೂ ಕೂಡ ಯಾರೊಬ್ಬರ ಜೀವನ ದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಒಳ್ಳೆಯ ಮಿತ್ರರಂತೆ ಒಳ್ಳೆಯ ಸಹೋದರ ಸಹೋದರೀಯರೊಬ್ಬರ ಜೀವವನ್ನು ಆನಂದಮಯವಾಗಿಸ ಬಲ್ಲರು. ಮತ್ತು ಸಹೋದರ ಸಹೋದರೀಯರಿಂದ ಜೀವನ ವಿನಾಶ ಗೊಳಿಸಬಲ್ಲರು. ಆದುದರಿಂದ ಶತ್ರು–ಮಿತ್ರರ, ಸಹೋರದ ಸಹೋದರಿ ಯರ, ಸೌಖ್ಯದ ವಿಷಯವಾಗಿ ಗುಣಪಠಾಪನ ಹೀಗೆ ಮಾಡಬೇಕೆಂಬುದನ್ನು ಪರಿಶೀಲಿಸುವಾ.

ಶತ್ರು, ಮಿತ್ರ, ಹಾಗೂ ಸಹೋದರ—ಸಹೋದರೀಯರ ಸೌಖ್ಯ ಅಸೌಖ್ಯದ ವಿಷಯುವಾರಿ ತಿಳಿಯಾಲು ನಾವು ನಾಲ್ಕು ಸಂಗತಿಗಳನ್ನು ಪರಿಶೀಸಬೇಕಾಗುತ್ತದೆ.

೧) ತೃತೀಯಸ್ಥಾನ ಹಾಗೂ ತೃತೀಯೇಶನ ಬಲಾಬಲ

೨) ಷಷ್ಠಸ್ಥಾನ ಹಾಗೂ ಷಷ್ಠೇಶನ ಬಲಾಬಲ

೩) ಲಾಭಸ್ಥಾನ (ಏಕಾದಶಸ್ಥಾನ) ಹಾಗೂ ಲಾಭೇಶನ ಬಲಾಬಲ

೪) ಶತ್ರು-ಮಿತ್ರರ ಸೌಖ್ಯ,ಅಸೌಖ್ಯದ ಯೋಗಗಳು ಹಾಗೂ ಸಹೋದರ ಸಹೋದರೀಯರ ಸೌಖ್ಯ, ಅಸೌಖ್ಯದ ಯೋಗಗಳು. ಇಲ್ಲಿ ಪ್ರತಿಯೊಂದು ಸಂಗತಿಗಳಿಗೆ ಎರಡೆರಡು ಗುಣಗಳನ್ನು ನಿರ್ಧರಿಸಲಾಗಿದ್ದು, ಅವುಗಳ ವಿವರಣೆ ಹೀಗಿದೆ.

ಶತ್ರು— ಮಿತ್ರರಸೌಖ್ಯ — ಅಸೌಖ್ಯದ ವಿಷಯಕ್ಕಿಂತ ಮೊದಲು ಸಹೋದರ ಸಹೋದರೀಯರ ಸೌಖ್ಯ ಅಸೌಖ್ಯದ ವಿಷಯವಾಗಿ ಪ್ರಸ್ತಾಪ ಮೊದಲು ಮಾಡಲು ಬಯಸುತ್ತೇನೆ. ಏಕೆಂದರೆ ಫಲ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಶತ್ರು-ಮಿತ್ರರಸೌಖ್ಯದ ವಿಷಯವಾಗಿ ಎರಡು ಸ್ಥಾನಗಳನ್ನು ಪರಿಶೀಲಿಸಬೇಕಾದರೆ ಸಹೋದರ ಸಹೋದರೀಯರ ಸೌಖ್ಯದ ವಿಷಯವನ್ನು ತಿಳಿದುಕೊಳ್ಳಲು ಒಂದೇ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಅಲ್ಲದೇ ಇದು ಗುಣಮಾಪನದ ವಿಷಯವಿರುವುದರಿಂದ ಹೇಗೆ ವಿದ್ಯಾರ್ಥಿಗಳು ಮೊದಲು ಸುಲಭವಾದ ಪ್ರಶ್ನೆಗಳನ್ನು ಉತ್ತರಿಸಿ ಆ ಬಳಿಕ ಕಠಿಣತರ, ಕಠಿಣ ತಮ ಪ್ರಶ್ನೆಗಳಿಗೆ ಉತ್ತರಿಸುತ್ತಾರೊ ಹಾಗೆಯೇ ಕೆಳಗಿನ ಕ್ರಮವನ್ನು ಅನುಸರಿಸಲಾಗಿದೆ.

## ೧) ತೃತೀಯಸ್ಥಾನ ಹಾಗೂ ತೃತೀಯೇಶನ ಮೇಲಿಂದ :

ಜಾತಕದ ತೃತೀಯಸ್ಥಾನದಿಂದ ಅನೇಕ ಸಂಗತಿಗಳು ತಿಳಿಯುತ್ತವೆ. ಪರಾಕ್ರಮ, ಕೀರ್ತಿ, ಹಸ್ತಾಕ್ಷರ ಕರಕೌಶಲ್ಯ ರುಚಿ, ಅಭಿರುಚಿ, ಕರ್ಣ ಬಧಿರತನದವಿಷಯ, ಪ್ರವಾಸ ಸಹೋದರ ಸಹೋದರೀಯರ ಸೌಖ್ಯ ಹೀಗೆ ಅನೇಕ ವಿಷಯಗಳನ್ನು ಈ ಸ್ಥಾನದಿಂದ ಪರಿಶೀಲಿಸುತ್ತಾರೆ. ಪ್ರಸ್ತುತವಾಗಿ ಈ ಅಧ್ಯಾಯದಲ್ಲಿ ಸಹೋದರ ಸಹೋದರೀಯರ ಸೌಖ್ಯದ ವಿಷಯ ವಿವೇಚಿಸಬೇಕಾಗಿರುವುದರಿಂದ ಸಹೋದರ, ಸಹೋದರೀಯರ ಸೌಖ್ಯದ ವಿಷಯಕ್ಕೆ ಮಾತ್ರ ಇಲ್ಲಿ ವಿವರಿಸಲಾಗಿದೆ.

ಜಾತಕದ ತೃತೀಯ ಸ್ಥಾನದಿಂದ ಸಹೋದರ–ಸಹೋದರಿಯರ ಸೌಖ್ಯದ ವಿಷಯ ತಿಳಿಯುತ್ತದೇನೋ ನಿಜ.ಆದರೆ ಸಹೋದರ–ಸಹೋದರಿಯರೆಂದು ಕೇವಲ ಒಡಹುಟ್ಟಿದವರು ಎಂದು ಅರ್ಥಮಾಡದೇ ಸ್ವಂತ ಅಣ್ಣ,ತಮ್ಮ,ಅಕ್ಕ ತಂಗಿ ಅಲ್ಲದೇ ಮಲಅಣ್ಣ, ಮಲತಮ್ಮ, ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳು (ಕಜೀನ್ಸ)ತಂದೆ ಇಲ್ಲವೆ ಕಕ್ಕಂದಿರು ದೊಡ್ಡಪ್ಪ ಇವರು ಸಾಕಲಂತೆಗೆಸೇಕೊಂಡ ಇಲ್ಲವೆ ದತ್ತಕ ತೆಗೆದುಕೊಂಡ ಎಲ್ಲ ಸಹೋದರ–ಸಹೋದರಿಯರ ವಿಷಯ ವಾಗಿ ತೃತೀಯ ಸ್ಥಾನದ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.ಆದುದ–ರಿಂದ ತೃತೀಯ ಸ್ಥಾನ, ಅಂದರೆತೃತೀಯ ಸ್ಥಾನದಲ್ಲಿರುವ ಬಲಾಢ್ಯ ಗ್ರಹ ಹಾಗೂ ತೃತಿಯೇಶನು ಬಲಾಢ್ಯನಿದ್ದರೆ ಸಹೋದರ ಸಹೋದರಿಯರಸೌಖ್ಯ ಸಿಗುತ್ತದೆ. ಆದುದರಿಂದ ೨ಗುಣಗಳಿಗೆ, ೨ಗುಣಗಳು ಲಭಿಸುತ್ತವೆ. ತೃತೀಯ ಸ್ಥಾನದಲ್ಲಿರುವ ಗ್ರಹ ಹಾಗೂ ತೃತಿಯೇಶನುದುರ್ಬಲನೂ ನಿರ್ಬಲನೂ ಇದ್ದು, ತೃತೀಯದಲ್ಲಿ ದುರ್ಬಲ,ನಿರ್ಬಲ ಗ್ರಹ ಅರ್ಥಾತ್ ತೃತೀಯ ಸ್ಥಾನ ದೂಷಿತ ವಿದ್ದರೆ ಶೂನ್ಯ ಗುಣ ಲಭಿಸುತ್ತದೆ ಇದರಲ್ಲಿ ಕೇವಲ ತೃತೀಯೇಶ ಬಲಾಢ್ಯನಿದ್ದು, ತೃತಿಯದಲ್ಲಿ ದುರ್ಬಲ ಗ್ರಹವಿದ್ದರೆ ೧ ಗುಣ ಲಭಿಸುತ್ತದೆ. ಇದರಂತೆ ತೃತೀಯದಲ್ಲಿ ದುರ್ಬಲ ಗ್ರಹವಿದ್ದು, ತೃತೀಯೇಶನು ಬಲಾಢ್ಯ ನಿದ್ದರೂ ಕೂಡ ೧ ಗುಣಲಭಿಸುತ್ತದೆ. ಹೀಗೆ ತೃತೀಯ ಸ್ಥಾನದಲ್ಲಿರುವ ಗ್ರಹ ತೃತೀಯೇಶನ ಬಲಾಬಲದ ಮೇಲೆ ಗುಣಮಾಪನ ಮಾಡುವುದು ಈ ವಿಷಯಕ್ಕೆ ಸಂಬಂಧಿಸಿದಂತೆ ಸ್ಥೂಲ ಪರಿಚಯವಾಯಿತು ಆದರೆ ಯಾವುದೇ ಗ್ರಹವು ತೃತೀಯೇಶನಾಗಿ ಬಲಾಢ್ಯನಿದ್ದರೆ ಅಥವಾ ತೃತೀಯ ಸ್ಥಾನದಲ್ಲಿ ಬಲಾಢ್ಯವಾಗಿದ್ದರೆ ಸ್ಥಾನಬಲದಿಂದ ಖಂಡಿತವಾಗಿ ಸಹೋದರ ಸಹೋದರಿ ಯರ ಸೌಖ್ಯ ಸಿಗುತ್ತದೆ. ಆದರೆ ವಿಭಿನ್ನ ಗ್ರಹಗಳ ಗುಣ ಧರ್ಮಗಳು ವಿಭಿನ್ನ ವಿರುವುದರಿಂದ ವಿಭಿನ್ನ ಪ್ರಕಾರದಸೌಖ್ಯ ಸಿಗುತ್ತದೆ. ಅವುಗಳ ಪರಿಚಯ ಮಾಡಿಕೊಳ್ಳುವಾ.

ಗುರು-ರವಿಯರು ಯಾರೊಬ್ಬರು ತೃತೀಯೇಶರಾಗಿ ಬಲಾಢ್ಯರಾಗಿ ದ್ದರೆ ಅಥವಾ ಬಲಾಢ್ಯರಾಗಿ ತೃತೀಯ ಸ್ಥಾನದಲ್ಲಿ ವಿರಾಜಮಾನರಾಗಿದ್ದರೆ. ಬಲಾಢ್ಯ ಎಂದರೇನು ಎಂಬುದನ್ನು ಈ ಹಿಂದೆ ಅನೇಕ ಬಾರಿ ವಿವರಿಸ

ಲಾಗಿದೆ ಖಂಡಿತವಾಗಿ ಇಂಥ ಜಾತಕನಿಗೆ ಸಹೋದರ ಸಹೋದರೀಯರ ಸೌಖ್ಯ ಸಿಗುತ್ತದೆ ಆದರೆ ಗುರು ಇಲ್ಲವೆ ರವಿಯುರು ಬಲಾಢ್ಯನಿದ್ದರೆ ಇವರಿಗೆ ಮನೆತನದ ಹೊಣೆಗಾರಿಕೆ ಜವಾಬದಾರಿ ಬಹಳ ಬೀಳುತ್ತದೆ. ಇತರ ಸಹೋದರ-ಸಹೋದರಿಯರ ಲಾಲನೆ ಪಾಲನೆ ಪೋಷಣೆ ಸಂರಕ್ಷಿಸುವ ಹೊಣೆಗಾರಿಕೆಯೂ ಇವರ ಮೇಲೆಯೇ ಇರುತ್ತದೆ. ಸೂರ್ಯನು ತೃತೀಯದಲ್ಲಿ ಅಥವಾ ತೃತೀಯೇಶನಾದ್ದರೆ ಇಂಥ ಜಾತಕನು ಜ್ಯೇಷ್ಠ ಪುತ್ರ ಇಲ್ಲವೆ ಜ್ಯೇಷ್ಠ ಪುತ್ರಿ ಇರುವುದೇ ಹೆಚ್ಚು. ಗುರುವು ತೃತೀಯದಲ್ಲಿದ್ದರೆ ಅಥವಾ ತೃತೀಯಾಧೀಶನಿದ್ದರೆ ರವಿಗಿಂತ ಮನೆತನದ ಹೊಣೆಗಾರಿಕೆ ಹೆಚ್ಚು ಬೀಳುತ್ತದೆ. ಸೂರ್ಯನು ತೃತೀಯದಲ್ಲಿದ್ದರೆ ಅಥವಾ ತೃತೀಯೇಶನಾಗಿ ಬಲಾಢ್ಯನಿದ್ದರೆ ಇತರಸಹೋದರ ಸಹೋದರಿಯರು ಇವರ ದಾದಾಗಿರಿಗಾಗಿ ಭಯದಿಂದ ಮರ್ಯಾದೆ ಕೊಡುತ್ತಾರೆ. ಆದರೆ ಗುರುವು ತೃತೀಯದಲ್ಲಿದ್ದರೆ ಅಥವಾ ತೃತಿಯೇಶನಾಗಿ ಬಲಾಢ್ಯನಾಗಿದ್ದರೆ ಇಂಥ ಜಾತಕನ ಸಹೋದರ ಸಹೋದರಿಯರು ಭಕ್ತಿಯಿಂದ ಇವರಿಗೆ ಮರ್ಯಾದೆ ಕೊಡುತ್ತಾರೆ.

ಚಂದ್ರ-ಶುಕ್ರರರಲ್ಲಿಯಾರೊಬ್ಬರು ಬಲಾಢ್ಯರಾಗಿ ತೃತೀಯದಲ್ಲಿದ್ದರೆ ಅಥವಾ ತೃತೀಯೇಶರಾಗಿ ಬಲಾಢ್ಯವಾಗಿದ್ದರೆ ಇವರಿಗೆ ಸಹೋದರ ಸಹೋದರೀಯರ ಸೌಖ್ಯ ಸಿಗುತ್ತದೆ. ಆದರೆ ಜಾತಕನ ಬೆನ್ನ ಮೇಲೆ ತಮ್ಮನಿಗಿಂತ ತಂಗಿ ಇರುವುದೇ ಹೆಚ್ಚು. ಜಾತಕನ ತೃತೀಯದಲ್ಲಿ ಬಲಾಢ್ಯ ರವಿ, ಮಂಗಳ ಗುರುಗಳಿದ್ದರೆ ಜಾತಕನ ಬೆನ್ನ ಮೇಲೆ ತಮ್ಮನಿರುವುದೇ ಹೆಚ್ಚು. ಬಲಾಢ್ಯಗುರು, ಚಂದ್ರ ಶುಕ್ರರು ತೃತೀಯದಲ್ಲಿದ್ದರೆ ಅಥವಾ ತೃತೀ-ಯೇಶರಾಗಿ ಬಲಾಢ್ಯರಾಗಿದ್ದ ಜಾತಕನು ಓಣಿಯ, ಊರಿನ ಅನೇಕ ಜನರಿಗೆ ಮಾಮಾ, ದಾದಾ, ಕಾಕಾ. ಎಂದೇ ಜನಪ್ರಿಯರಾಗಿರುತ್ತಾರೆ. ಶನಿ, ಮಂಗಳ, ರಾಹು, ಈ ಮೂರು ಗ್ರಹಗಳಲ್ಲಿ ಯಾವುದೊಂದು ಗ್ರಹವು ತೃತೀಯದಲ್ಲಿದ್ದ ಜಾತಕನಿಗೆ ಸಹೋದರ ಸಹೋದರಿಯರ ಸೌಖ್ಯ ಸಿಗುವುದಿಲ್ಲ. ಅವರು ತೃತೀಯೇಶರಾಗಿ ನಿರ್ಬಲರೂ ದುರ್ಬಲರಿದ್ದರಂತೂ ದಾಯಾದಿಗಳಂತೆ ವೈರ ಸಾಧಿಸುವರು. ಆದರೆ ಶನಿ, ಮಂಗಳರು ತೃತೀಯಾಧಿಪತಿಯಾಗಿ ತೃತೀಯ ದಲ್ಲಿದ್ದರೆ ಮಾತ್ರ ಸ್ಥಾನಬಲದಿಂದ ಸ್ವಲ್ಪ ಸಹೋದರ ಸಹೋದರೀಯರ

ಸೌಖ್ಯ ಸಿಗುತ್ತದೆ. ಅದು ಕೂಡ ಭಯದ, ದರ್ಪದ ವಾತಾವರಣದಿಂದಾಗಿ ಇರುತ್ತದೇವಿನಃ ಭಕ್ತಿಯಿಂದಲ್ಲ. ಬುಧನು ಬಲಾಢ್ಯನಾಗಿ ತೃತೀಯಸ್ಥಾನದಲ್ಲಿ ಇರುವುದಾಗಲೀ ತೃತೀಯೇಶನಾಗಿ ಬಲಾಢ್ಯನಾಗಿ ಇರುವುದಾಗಲಿ ಇದ್ದರೆ ಸಹೋದರ ಸಹೋದರೀಯರಸೌಖ್ಯ ಸಾಧಾರಣ ವಿರುತ್ತದೆ. ಅಂದರೆ ಗುರು, ಶುಕ್ರ ಚಂದ್ರರಂತೆ ಭಕ್ತಿಪ್ರಿಯ ಸೌಖ್ಯವಾಗಲೀ ಶನಿ–ಮಂಗಳ ರವಿಯಂತೆ ಭಯ ದರ್ಪದ ಸೌಖ್ಯವಾಗಲೀ ಇರದೇ ಸರ್ವಸಾಧಾರಣ ಸಹೋದರ ಸಹೋದರೀಯರಸೌಖ್ಯ ಸಿಗುತ್ತದೆ.

ಹೀಗೆ ಸಹೋದರ ಸಹೋದರೀಯರ ಸೌಖ್ಯದ ವಿಷಯವಾಗಿ ತೃತೀಯ ಸ್ಥಾನದಲ್ಲಿರುವ ಗ್ರಹ ಹಾಗೂ ತೃತೀಯಾಧೀಶನ ಬಲಾಬಲವನ್ನು ತೂಗಿ ಗುಣಮಾಪನ ಮಾಡಬೇಕು.

## ೨) ಷಷ್ಠಸ್ಥಾನ ಹಾಗೂ ಷಷ್ಠೇಶನ ಮೇಲಿಂದ :

ಜಾತಕದ ಷಷ್ಠಸ್ಥಾನದ ಮೇಲಿಂದ ಅನೇಕ ಸಂಗತಿಗಳು ತಿಳಿಯುತ್ತವೆ. ಯಾರೊಬ್ಬರರ ತೀವ್ರಬಾಧೆಯ ರೋಗಗಳು, ಆರೋಗ್ಯ, ಅಗ್ನಿಭಯ, ಶತ್ರುಭಯ, ಚೋರಭಯ ಅನೇಕ ಬಗೆಯ ವಿಪತ್ತು. ತುರಂಗವಾಸ, ತಾಯಿಯ ಕಡೆಯ ಬಳಗದವರಸೌಖ್ಯ, ಅಸೌಖ್ಯವಿಚಾರ ದನಕರುಗಳ ಸಂಬಂಧದ ವಿಚಾರ ಶರೀರ ವಿಜ್ಞಾನದ ಶಾಸ್ತ್ರದಪ್ರಕಾರ ಸಣ್ಣಕರಳು, ನಾಭಿ, ಟೊಂಕ, ಗಿರಣಿ–ಕಾರಖಾನೆ ಮೊದಲಾದ ವೃತ್ತಿಗೆ ಸಂಬಧಿಸಿದ, ಶತ್ರುಪೀಡೆ ಇವೇ ಮೊದಲಾದ ವಿಚಾರಗಳನ್ನು ಷಷ್ಠಸ್ಥಾನದಿಂದ ಪರಿಶೀಲಿಸುತ್ತಾರೆ ಪ್ರಸ್ತುತಃ ಈ ಅಧ್ಯಾಯದಲ್ಲಿ ಶತ್ರುಪೀಡೆ, ಶತ್ರುಭಯದ ವಿಷಯವಾಗಿ ಗುಣಮಾಪನ ಹೇಗೆ ಮಾಡಬೇಕುಎಂಬುದನ್ನು ಪರಿಶೀಲಿಸುವಾ.

ಷಷ್ಠಸ್ಥಾನವಿದು ಶತ್ರುಪೀಡೆ ಶತ್ರುಭಯದ ಸ್ಥಾನವಿದು. ಷಷ್ಠಸ್ಥಾನವೆಂದರೆ ಷಷ್ಠಸ್ಥಾನದಲ್ಲಿರುವ ಗ್ರಹ. ಆದುದರಿಂದ ಷಷ್ಠಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದು, ಷಷ್ಠೇಶನೂ ಬಲಾಢ್ಯನಿದ್ದರೆ ಇಂಥ ಜಾತಕನಿಗೆ ಶತ್ರುಭಯ, ಶತ್ರುಪೀಡೆ ವಿರುವುದಿಲ್ಲ. ಆದುರಿಂದ ೨ ಗುಣಗಳಿಗೆ ೨ ಗುಣಗಳು ಲಭಿಸುತ್ತವೆ. ಆದರೆ ಷಷ್ಠಸ್ಥಾನ ದೂಷಿತ ಅಂದರೆ ಷಷ್ಠಸ್ಥಾನದಲ್ಲಿ ದುರ್ಬಲ,

ನಿರ್ಬಲ ಗ್ರಹವಿದ್ದು, ಷಷ್ಠೇಶನು ದುರ್ಬಲನಿರ್ಬಲನಿದ್ದರೆ ಶೂನ್ಯಗುಣ ದೊರೆಯುತ್ತದೆ. ಆದರೆ ಷಷ್ಠದಲ್ಲಿ ಬಲಾಢ್ಯಗ್ರಹವಿದ್ದು ಷಷ್ಠೇಶನು ದುರ್ಬಲ ನಿದ್ದರೆ ೧ ಗುಣ. ಷಷ್ಠೇಶನು ಬಲಾಢ್ಯನಿದ್ದು, ಷಷ್ಠದಲ್ಲಿ ದುರ್ಬಲಗ್ರಹ ವಿದ್ದರೂ ೧ ಗುಣ ಲಭಿಸುತ್ತದೆ. ಇದು ಸಾಮಾನ್ಯ ಗುಣಮಾಪನವಿರುತ್ತದೆ. ಆದರೆ ವಿಶಿಷ್ಟಗ್ರಹಗಳ ಗುಣಧರ್ಮದಿಂದ ವಿಶಿಷ್ಟಫಲಗಳು ದೊರೆಯುತ್ತಿದ್ದು ಅವುಗಳ ವಿವರಣೆ ಹೀಗಿದೆ.

ಸಾಮಾನ್ಯವಾಗಿ ಶುಭಗ್ರಹಗಳು ಷಷ್ಠದಲ್ಲಿದ್ದರೆ ಶತ್ರುಪೀಡೆ. ಶತ್ರು ಭಯ ಬಹಳ ಪಾಪಗ್ರಹಗಳು ಷಷ್ಠದಲ್ಲಿ ಶುಭವಿದ್ದು ಶತ್ರುಮರ್ದನ ಶತ್ರು ಕುಠಾರ, ಶತ್ರುದಮನವಿರುತ್ತದೆ. ಹೇಗೆ ಮಾತೃಸೌಖ್ಯಕ್ಕೆ ಚಂದ್ರನು ಪತಿ, ಪತ್ನಿಸೌಖ್ಯಕ್ಕೆ ಶುಕ್ರನು ಸಂತತಿಸೌಖ್ಯಕ್ಕೆ ಗುರುವು ಹಾಗೆ ಶತ್ರುದಮನಕ್ಕೆ ಮಂಗಳನು ಕಾರಕನು. ಮಂಗಳನ ತರುವಾಯ ರಾಹು ರವಿ ಗ್ರಹಗಳು ಕಾರಕರು. ಬಲಾಢ್ಯ ಮಂಗಳನು ಷಷ್ಠದಲ್ಲಿದ್ದರೆ ಇವರಿಗೆ ಶತ್ರುಗಳ ಭಯವಿಲ್ಲ. ಇಷ್ಟೇಅಲ್ಲ ಇವರಿಗೆ ಶತ್ರುಗಳು ಅಂಜುತ್ತಾರೆ. ಮಂಗಳನ ತರು ವಾಯ ರಾಹು, ರವಿ ಗ್ರಹಗಳು ಕೂಡ ಶತ್ರು ದಮನಕ್ಕೆ ಕಾರಕರು. ಬಲಾಢ್ಯ ರಾಹು, ರವಿಯಾರೊಬ್ಬರು ಬಲಾಢ್ಯರಾಗಿ ಷಷ್ಠದಲ್ಲಿದ್ದರೆ ಶತ್ರು ಭಯವಿರುವುದಿಲ್ಲ. ಇದರಂತೆ ಮಂಗಳ, ರವಿಯರು ಷಷ್ಠೇಶರಾಗಿ ಬಲಾಢ್ಯ ರಿದ್ದರೂ ಶತ್ರುಪೀಡೆ ಇರುವುದಿಲ್ಲ.

ಹೀಗೆ ಮಾತೃಸೌಖ್ಯಕ್ಕೆ ಮಂಗಳನು ಮಾರಕನೋ ಹಾಗೆ ಶತ್ರುಪೀಡೆಗೆ ಶತ್ರುಭಯಕ್ಕೆ ಚಂದ್ರನು ಮಾರಕನು (ಸ್ವಕ್ಷೇತ್ರಿ ಉಚ್ಚರಾಶಿಯಹೊರ ತಾಗಿ) ಅಂದರೆ ಶತ್ರುಪೀಡೆ ಶತ್ರುಭಯ ಬಹಳ. ಚಂದ್ರನ ತರುವಾಯ ಗುರು,ಶುಕ್ರ,ಬುಧ ಶನಿಯರೂ ಕೂಡ ಶತ್ರುಪೀಡಾಕಾರಕ ಗ್ರಹಗಳು.ಚಂದ್ರ, ಗುರು,ಶುಕ್ರ ಬುಧ ಶನಿಯರು ಷಷ್ಠದಲ್ಲಿದ್ದರೆ (ಸ್ವಕ್ಷೇತ್ರಿ ಉಚ್ಚರಾಶಿಯ ಹೊರತಾಗಿ)ಅಥವಾ ಷಷ್ಠೇಶರಾಗಿ ನಿರ್ಬಲರಿದ್ದರೆ ಶತ್ರುಪೀಡೆ ಬಹಳ.

ದ್ವಾದಶಸ್ಥಾನದಲ್ಲಿರುವ ಗ್ರಹಗಳ ಪರಿಣಾಮ ಕೂಡ ಷಷ್ಠಸ್ಥಾನದ ಮೇಲೆ ಆಗುವುದರಿಂದ ಈ ಗ್ರಹಗಳ ಬಲಾಬಲವನ್ನು ಕೂಡ ಪರಿಶೀಲಿಸಿ ಶತ್ರುಪೀಡೆ, ಶತ್ರುದಮನದ ವಿಷಯವಾಗಿ ಗುಣಮಾಪನ ಮಾಡಬೇಕು.

೩) ಲಾಭಸ್ಥಾನ ಹಾಗೂ ಲಾಭೇಶನ ಮೇಲಿಂದ :

ಜಾತಕದ ಏಕಾದಶ ಸ್ಥಾನಕ್ಕೆ ಅಂದರೆ ಹನ್ನೊಂದನೇ ಸ್ಥಾನಕ್ಕೆ ಲಾಭ ಸ್ಥಾನ ಎನ್ನುತ್ತಾರೆ. ಈ ಸ್ಥಾನದಿಂದ ಉದ್ಯೋಗ ನೌಕರಿ ವೃತ್ತಿಯಿಂದ ಬರುವ ಎಲ್ಲ ಪ್ರಕಾರ ಲಾಭದ ವಿಷಯವಾಗಿ ಸ್ಥಾವರ ಜಂಗಮದ ಆಸ್ತಿ ವಿಷಯವಾಗಿ ಅದರಲ್ಲಿಯೂ ಜಂಗಮ. ರೋಖ ಹಣ, ಬಡ್ಡಿಯಿಂದ ಬರುವಹಣ ಹಿರಿಯ ಸಹೋದರನ ವಿಷಯವಾಗಿ ಹಾಗೂ ಮಿತ್ರರ ಸಂಖ ಮೈತ್ರೀಯ ಸಂಬಂಧ ಈವೇ ಮೊದಲಾದ ವಿಷಯಗಳನ್ನು ಈ ಸ್ಥಾನದಿಂದ ಪರಿಶೀಲಿಸುತ್ತಾರೆ. ಪ್ರಸ್ತುತಃ ಈ ಅಧ್ಯಾಯದಲ್ಲಿ ಮಿತ್ರಸೌಖ್ಯದ ವಿಷಯ ವಾಗಿ ಗುಣಮಾಪನ ಹೇಗೆ ಮಾಡಬೇಕು ಎಂಬುದನ್ನು ಪರಿಶೀಲಿಸುವಾ.

ಲಾಭಸ್ಥಾನವಿದ್ದು ಮಿತ್ರಸೌಖ್ಯದ ಸ್ಥಾನವಿದ್ದು. ಲಾಭಸ್ಥಾನವೆಂದರೆ ಲಾಭಸ್ಥಾನದಲ್ಲಿರುವ ಗ್ರಹದ ಬಲಾಬಲ. ಆದುದರಿಂದ ಲಾಭಸ್ಥಾನದಲ್ಲಿರುವ ಗ್ರಹ ಹಾಗೂ ಲಾಭೇಶನು ಬಲಾಢ್ಯರಿದ್ದರೆ ಜಾತಕನಿಗೆ ಮಿತ್ರಸೌಖ್ಯ ಚನ್ನಾಗಿ ರುತ್ತದೆ. ಆದುದರಿಂದ ೨ ಗುಣಗಳಿಗೆ ೨ ಗುಣಗಳು ಬರುತ್ತವೆ. ಲಾಭ ಸ್ಥಾನದಲ್ಲಿ ದುರ್ಬಲ ಗ್ರಹವಿದ್ದು ಲಾಭೇಶನು ದುರ್ಬಲ ನಿರ್ಬಲನಿದ್ದರೆ ಶೂನ್ಯಗುಣ ದೊರೆಯುತ್ತದೆ. ಆದರೆ ಲಾಭಸ್ಥಾನದಲ್ಲಿ ಬಲಾಢ್ಯಗ್ರಹವಿದ್ದು ಲಾಭೇಶನು ದುರ್ಬಲನಿದ್ದರೆ ೧ ಗುಣ ಲಭಿಸುತ್ತದೆ. ಇದರಂತೆ ಲಾಭೇಶನು ಬಲಾಢ್ಯನಿದ್ದು, ಲಾಭಸ್ಥಾನದಲ್ಲಿ ದುರ್ಬಲ ಗ್ರಹವಿದ್ದರೂ ೧ ಗುಣ ಲಭಿಸು ತ್ತದೆ. ಇದು ಸಾಮಾನ್ಯ ಗುಣಮಾಪನ ವಿಧಾನ ಇರುತ್ತದೆ. ಆದರೆ ವಿಶಿಷ್ಟ ಗ್ರಹಗಳ ಗುಣಧರ್ಮದಿಂದ ವಿಶಿಷ್ಟ ಫಲಗಳು ದೊರೆಯುತ್ತಿದ್ದು, ಅವುಗಳ ವಿವರಣೆ ಹೀಗಿದೆ.

ಈ ಸ್ಥಾನದಲ್ಲಿ ಅಂದರೆ ಲಾಭಸ್ಥಾನದಲ್ಲಿ ಯಾವುದೇ ಗ್ರಹವಿದ್ದರೂ ಸ್ಥಾನಬಲದ ಮೂಲಕ ಶುಭಫಲ ಕೊಡುತ್ತವೆ. ಆದರೆ ರಾಶಿಬಲದವರಿದ್ದರೆ ಹೆಚ್ಚು ಶುಭಫಲವು. ಅಲ್ಲದೇ ವಿಶಿಷ್ಟ ಗ್ರಹಗಳ ಗುಣಧರ್ಮದಂತೆ ಶುಭ ಫಲಗಳಲ್ಲಿಯೂ ತಾರತಮ್ಯ ಹಾಗೂ ವಿಭಿನ್ನತೆ ಇರುತ್ತದೆ.ಅವುಗಳ ವಿವರಣೆ ಹೀಗಿದೆ, ಲಾಭಸ್ಥಾನದಲ್ಲಿ ಇಲ್ಲವೆ ಲಾಭೇಶನಾಗಿ ಬಲಾಢ್ಯಸೂರ್ಯನಿದ್ದರೆ

ಮಿತ್ರರಸೌಖ್ಯವೇನೋ ಇದೆ ಆದರೆ ಸಮಾಜದ ಗಣ್ಯವ್ಯಕ್ತಿಗಳ ಅಂದರೆ ಪರಿಷ್ಠ ಅಧಿಕಾರಿಗಳ ರಾಜಕಾರಣಿಗಳ ನ್ಯಾಯಾಧೀಶರ, ದೊಡ್ಡ ದೊಡ್ಡ ಉದ್ಯಮೆದಾರರ ಮಿತ್ರರಿರುತ್ತಾರೆ. ಆದರೆ ಮಿತ್ರರ ಸಂಖ್ಯೆಕಡಿಮೆ. ಲಾಭೇಶನಾಗಿ ಇಲ್ಲವೇ ಲಾಭಸ್ಥಾನದಲ್ಲಿ ಬಲಾಢ್ಯಚಂದ್ರನಿದ್ದರೆ ಮಿತ್ರಮಂಡಳಿ ಬಹಳ. ವಿವಿಧ ದರ್ಜೆಯ ಅನೇಕ ಮಿತ್ರರಿದ್ದು, ಮಿತ್ರರ ಸೌಖ್ಯವೂ ಸಿಗುತ್ತದೆ. ಆದರೆ ಲಾಭದಲ್ಲಿದ್ದ ಚಂದ್ರನ ಮೇಲಾಗಲಿ ಲಾಭೇಶನಾದ ಚಂದ್ರನ ಮೇಲಾಗಲಿ ಶನಿದೃಷ್ಟಿತ, ಇಲ್ಲವೆ ರಾಹುದೃಷ್ಟಿತ ವಿದ್ದರೆ ಕೆಲವರುಪಗಳ ನಂತರ ಅತ್ಯಂತ ಆತ್ಮೀಯಮಿತ್ರರೇ ವಿಶ್ವಾಸಘಾತ ಮಾಡುವರು. ಇಲ್ಲವೆ ಶತ್ರುಗಳಾಗಿ ಮಾರ್ಪಡುತ್ತಾರೆ. ಲಾಭೇಶನಾಗಿ ಇಲ್ಲವೇ ಲಾಭಸ್ಥಾನದಲ್ಲಿ ಬಲಾಢ್ಯ ಮಂಗಳನಿದ್ದರೆ ಮಿತ್ರರಸೌಖ್ಯ ವಿರುತ್ತದೆ. ಆದರೆ ಸಂಖ್ಯೆಕಡಿಮೆ. ಅಲ್ಲದೇ ಮಿತ್ರತ್ವಕೂಡ ಬಹಳ ಅವಧಿಯವರೆಗೆ ಹಾಗೂ ಗಾಢವಾಗಿ ವಿರುವುದಿಲ್ಲ. ಶತ್ರುಕ್ಷೇತ್ರಿ ಇಲ್ಲವೇ ನೀಚರಾಶಿ ಇಲ್ಲವೆ ಶನಿದೃಷ್ಟಿತ ಶನಿಯೊಂದಿಗೆ ಮಂಗಳನಿದ್ದರೆ ಮಿತ್ರರೆಶತ್ರುಗಳಾಗಿ ಹಾನಿಯನ್ನುಂಟು ಮಾಡುತ್ತಾರೆ. ಲಾಭೇಶನಾಗಿ ಇಲ್ಲವೇ ಲಾಭಸ್ಥಾನದಲ್ಲಿ ಬಲಾಢ್ಯ ಬುಧನಿದ್ದರೆ ಮಿತ್ರರ ಸಂಖ್ಯೆ ಹೆಚ್ಚು. ಮಿತ್ರರ ಸೌಖ್ಯವು ಇರುತ್ತದೆ. ಎಲ್ಲಪ್ರಕಾರದ ಎಲ್ಲ ದರ್ಜೆಯ ಮಿತ್ರರಿರುತ್ತಾರೆ. ಲಾಭೇಶನಾಗಿ ಇಲ್ಲವೇ ಲಾಭಸ್ಥಾನದಲ್ಲಿ ಬಲಾಢ್ಯ ಗುರುವಿದ್ದರೆ ಮಿತ್ರರ ಸಂಖ್ಯೆ ಬಹಳ ಅಲ್ಲದೆ ಮಿತ್ರಸೌಖ್ಯವಿದೆ. ಆದರೆ ವಿದ್ವಾಂಸರು, ಪತ್ರಿಷ್ಕಿತರು, ತತ್ವಜ್ಞಾನ ಅಧ್ಯಾತ್ಮದ ಧರ್ಮದ ಒಲವುಳ್ಳ ಮಿತ್ರರಿರುವದೇ ಹೆಚ್ಚು. ಲಾಭೇಶನಾಗಿ ಇಲ್ಲವೇ ಲಾಭದಲ್ಲಿ ಬಲಾಢ್ಯಶುಕ್ರನಿದ್ದರೆ ಮಿತ್ರರ ಸಂಖ್ಯೆ ಹೆಚ್ಚು ಮತ್ತು ಮಿತ್ರರಸೌಖ್ಯವೂ ಇದೆ. ಸಮಾಜದ ಎಲ್ಲ ಬಗೆಯ ಮಿತ್ರರಿರುತ್ತಾರೆ.ಆದರೆ ವ್ಯಸನೀ ಮಿತ್ರರಿರುವುದೇ ಹೆಚ್ಚು. ಕಲಾಕಾರ ಮಿತ್ರರಿರುವುದೇ ಹೆಚ್ಚು ವಿಲಾಸಿಮಿತ್ರರಿಗಾಗಿ ಹಣ ನೀರಿನಂತೆ ಖರ್ಚುಮಾಡುವರು. ಲಾಭೇಶನಾಗಿ ಇಲ್ಲವೇ ಲಾಭದಲ್ಲಿ ಬಲಾಢ್ಯ ಶನಿಯುಇದ್ದರೆ. ಮಿತ್ರರಸಂಖ್ಯೆ ಹೆಚ್ಚು ಮಿತ್ರರ ಸೌಖ್ಯವೂ ಇರುತ್ತದೆ.ಸಮಾಜದ ಕೆಳದರ್ಜೆಯ ಇಲ್ಲವೆ ದೀನದಲಿತರ ಸಂಖ್ಯೆಯೇ ಇರುತ್ತದೆ. ಅಲ್ಲದೆ ಇಂಥ ಜಾತಕನು ಸಂಘಸಂಸ್ಥೆಗಳನ್ನು ಬೆಳೆಸುತ್ತಾನೆ. ಟ್ರೇಡಯುನಿಯನ್ನಿನ ಧುರೀಣರಾಗುವುದೇ ಹೆಚ್ಚು. ಅಲ್ಲದೇ ಇವರೇ ಮಿತ್ರರಿಗಾಗಿ

ಖರ್ಚುಮಾಡಬೇಕಾಗುತ್ತದೆ. ತ್ಯಾಗಮಾಡಬೇಕಾಗುತ್ತದೆ. ಮಿತ್ರರು ಎನ್ನುವದಕ್ಕಿಂತ ಅಭಿಮಾನಿಗಳು ಹಾಗೂ ಹಿಂಬಾಲಕರಸಂಖ್ಯೆ ಒಹಳ. ಆದರೆ ಲಾಭೇಶನಾದ ಶನಿಯು ಶತ್ರುಕ್ಷೇತ್ರೀಯಲ್ಲಿ ಮಂಗಳದೃಷ್ಟಿತನಿದ್ದರೆ ಅಥವಾ ಶತ್ರುಕ್ಷೇತ್ರಿ ನೀಚರಾಶಿಯ ಶನಿಯು ಲಾಭದಲ್ಲಿದ್ದು, ಮಂಗಳದೃಷ್ಟಿತ ಇಲ್ಲವೆ ಮಂಗಳ, ರವಿಯರೊಂದಿಗೆ ಇದ್ದರೆ ಇಂಥ ಜಾತಕನು ಹಿಂಬಾಲಕರಿಂದಲೇ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಲಾಭಸ್ಥಾನದಲ್ಲಿ ರಾಹು ಇಲ್ಲವೇ ಕೇತುಗಳಿದ್ದರೆ ಮಿತ್ರರಸಂಖ್ಯೆ ಹಾಗೂ ಸೌಖ್ಯಕಡಿಮೆ. ಆದರೆ ದುರ್ವ್ಯಸನಿ ಇಲ್ಲವೆ ಕೆಳವರ್ಗಿಯ ಮಿತ್ರರಿರುವುದೇ ಹೆಚ್ಚು. ಗುರು, ಚಂದ್ರ, ಶುಕ್ರ ರವಿ, ಬುಧ ಈ ಗ್ರಹಗಳು ಬಲಾಢ್ಯರಾಗಿ ಲಾಭದಲ್ಲಿದ್ದರೆ ದಾದಾ, ಮಾಮಾ ಕಾಕಾ ಎಂದು ಓಣಿಯಲಿ ಊರಲ್ಲಿ ಇವರು ಪ್ರಸಿದ್ಧರು. ಹೀಗೆ ವಿವಿಧಗ್ರಹಗಳ ಗುಣಧರ್ಮದಂತೆ ಮಿತ್ರರಸೌಖ್ಯ ವಿರುವುದರಿಂದ ಗುಣಮಾಪನ ಮಾಡುವಾಗ ಈ ಅಂಶವನ್ನು ಲಕ್ಷದಲ್ಲಿಡಬೇಕು.

### ೪) ಶತ್ರು-ಮಿತ್ರರ, ಸಹೋದರ-ಸಹೋದರೀಯರ ಸೌಖ್ಯದ ಯೋಗಗಳು :

೧) ಯಾವುದೇ ಗ್ರಹವು ಷಷ್ಠೇಶರಾಗಿ ಷಷ್ಠಸ್ಥಾನದಲ್ಲಿದ್ದರೆ ಶತ್ರುಕಾಟ ವಿರುವುದಿಲ್ಲ.

೨) ಯಾವುದೇ ಗ್ರಹವು ಲಾಭೇಶರಾಗಿ ಲಾಭಸ್ಥಾನದಲ್ಲಿದ್ದರೆ ಮಿತ್ರರ ಸೌಖ್ಯ ಬಹಳ,

೩) ಯಾವುದೇ ಗ್ರಹವು ತೃತಿಯೇಶನಾಗಿ ತೃತೀಯ ಸ್ಥಾನದಲ್ಲಿದ್ದರೆ ಸಹೋದರ ಸಹೋದರಿಯರ ಸೌಖ್ಯ ಸಿಗುತ್ತದೆ.

೪) ಬಲಾಢ್ಯ ಗುರುವು ತೃತೀಯ, ಭಾಗ್ಯ, ಲಾಭ ಈ ಸ್ಥಾನದಲ್ಲಿದ್ದರೆ ಸಹೋದರ ಸಹೋದರೀಯರ ಸೌಖ್ಯ ಸಿಗುತ್ತದೆ.

೫) ರವಿ, ಮಂಗಳ, ರಾಹು ಈ ಮೂರು ಗ್ರಹಗಳಲ್ಲಿ ಯಾವುದೊಂದು ಗ್ರಹ ಬಲಾಢ್ಯವಾಗಿ ಷಷ್ಠದಲ್ಲಿದ್ದರೆ, ಶತ್ರುಗಳಿಂದ ತೊಂದರೆ ಇರುವುದಿಲ್ಲ.

ಹೀಗೆ ಮೇಲೆ ಬರೆದ ಯೋಗಗಳಿದ್ದರೆ ೨ ಗುಣಗಳಿಗೆ ೨ ಗುಣಗಳು ಲಭಿಸುತ್ತದೆ. ಇಂಥ ಅನೇಕ ಯೋಗಗಳಿದ್ದು ಮಾದರೀಗಾಗಿ ಮಾತ್ರ ಐದು ಯೋಗಗಳ ಉಲ್ಲೇಖ ಮಾಡಲಾಗಿದೆ.

### ಶತ್ರು-ಮಿತ್ರ, ಸಹೋದರ – ಸಹೋದರೀಯರ ಅಸೌಖ್ಯದ ಯೋಗಗಳು :

೧) ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರ, ಚಂದ್ರ-ರಾಹು, ರವಿ-ಕೇತು ಈ ಗ್ರಹಗಳಯುತಿಯೋಗ ಪ್ರತಿಯೋಗವು ಷಷ್ಠ- ವ್ಯಯ, ಲಾಭ ಚತುರ್ಥ,ದಶಮ, ಪಂಚಮ,ತೃತೀಯ, ಭಾಗ್ಯದಲ್ಲಿದ್ದರೆ ಶತ್ರುಪೀಡೆ ಬಹಳ.

೨) ನಿರ್ಬಲ ದುರ್ಬಲ ಚಂದ್ರ ಶುಕ್ರರು ಷಷ್ಠದಲ್ಲಿದ್ದರೆ ಶತ್ರುಪೀಡೆಬಹಳ

೩) ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರ, ಚಂದ್ರ-ರಾಹು, ರವಿ-ಕೇತು ಈ ಗ್ರಹಗಳ ಯುತಿಯೋಗ ಪ್ರತಿಯೋಗವು ತೃತೀಯ,ಭಾಗ್ಯದಲ್ಲಿದ್ದರೆ ಸಹೋದರ ಸಹೋದರೀಯರ ಸೌಖ್ಯ ಸಿಗುವುದಿಲ್ಲ.

ಹೀಗೆ ಮೇಲೆ ಬರೆದ ಯೋಗಗಳಿದ್ದರೆ ಶೂನ್ಯ ಗುಣಗಳು. ಇಂಥ ಅನೇಕ ಯೋಗಗಳಿದ್ದು ಮಾದರಿಗಾಗಿ ಮೂರು ಯೋಗಗಳ ಉಲ್ಲೇಖ ಮಾಡಲಾಗಿದೆ.



# ೧೦

# ಶುಭ–ಅಶುಭ, ಯೋಗಗಳು

## ಗುಣಗಳು ೧೦

ಫಲಜ್ಯೋತಿಷ್ಯ ಶಾಸ್ತ್ರದಲ್ಲಿ ಅರ್ಥಾತ್ ಕುಂಡಲಿ ವಿಜ್ಞಾನ ಶಾಸ್ತ್ರದಲ್ಲಿ ಶುಭ-ಅಶುಭ ಯೋಗಗಳು ವಿಶಿಷ್ಟಪಾತ್ರವನ್ನು ವಹಿಸುತ್ತವೆ. ಯಾವುದೇ ಜಾತಕನ ಮೇಲೆ ಈ ಶುಭ-ಅಶುಭ ಯೋಗಗಳ ಪರಿಣಾಮವು ಬಹಳ ಮುಖ್ಯವಿರುತ್ತದೆ. ಉದಾಹರಣೆಗೆ ಯಾರೊಬ್ಬ ಜಾತಕನು (ವ್ಯಕ್ತಿಯು) ಸರ್ವಸಾಧಾರಣ ಕುಟುಂಬದಲ್ಲಿ ಜನಿಸಿದ ಆದರೆ ಶೈಕ್ಷಣಿಕವಾಗಿಯೂ ಆರ್ಥಿಕವಾಗಿಯೂ ಸಾಮಾಜಿಕವಾಗಿಯೂ ರಾಜಕೀಯವಾಗಿಯೂ ಪ್ರತಿಷ್ಠಿತ ಮನೆತನದಿಂದಾಗಿಯೂ ಮೊದಲಾದ ಯಾವುದೇ ಹಿನ್ನಲೆ ಇಲ್ಲದೇ ಜನ್ಮಿಸಿದ ವ್ಯಕ್ತಿಯು ಆತನ ಜನನಕಾಲದಲ್ಲಿಯ ವಿಶಿಷ್ಟ ಗ್ರಹಯೋಗ, ರಾಜಯೋಗಗಳಿಂದಾಗಿ ಸಮಾಜದಲ್ಲಿ ಗಣ್ಯಸ್ಥಾನ ಮಾನ,ಅಧಿಕಾರ ಪಡೆಯು ಬಹುದಾಗಿದೆ. ಇದರ ತದ್ವಿರುದ್ಧವಾಗಿ ಮಾನ್ಯ ಪ್ರತಿಷ್ಠಿತ, ಶ್ರೀಮಂತ ಸುಶಿಕ್ಷಿತ, ಸುಸಂಸ್ಕೃತ ಪ್ರಭಾವಿತ ಗಣ್ಯವ್ಯಕ್ತಿಗಳ ಮನೆಯಲ್ಲಿ ಮನೆತನದಲ್ಲಿ ಜನಿಸಿದರೂ ಜಾತಕನ ಜಾತಕದಲ್ಲಿಯ ಕುಯೋಗವಿದ್ದಲ್ಲಿ ಆ ಜಾತಕನು ಅತ್ಯಂತ ಹೀನಾ ವಸ್ಥೆಗೆ ಬರಬಹುದಾಗಿದೆ. ಇದಕ್ಕೆಲ್ಲ ಜಾತಕನ ಜಾತಕ ದಲ್ಲಿಯ ಯೋಗಗಳೇ ಕಾರಣವು. ಆದುದರಿಂದ ಫಲಜ್ಯೋತಿಷ್ಯ ಶಾಸ್ತ್ರ ದಲ್ಲಿ ಈ ಶುಭ – ಅಶುಭ ಯೋಗಗಳ ಪರಿಣಾಮ ಹಾಗೂ ಪ್ರಭಾವದ ಎಷ್ಟುಮಹತ್ವದ್ದು ಎಂಬುದರ ಕಲ್ಪನೆ ಬರುತ್ತದೆ.

ಯೋಗಗಳೆಂದರೇನು ? ಯಾವ ಯೋಗಗಳು ಶುಭಫಲಕೊಡುತ್ತವೆ. ಯಾವ ಯಾವ ಯೋಗಗಳು ಅಶುಭ ಫಲಕೊಡುತ್ತವೆ. ಶುಭ–ಅಶುಭ ಫಲಗಳಲ್ಲಿಯ ವೈವಿಧ್ಯ – ಈ ಎಲ್ಲ ಸಂಗತಿಗಳ ಸಮಗ್ರ ವಿಶ್ಲೇಷಣೆಯನ್ನು ನಾವು ಶೀಘ್ರದಲ್ಲಿಯೇ ಬರೆದು ಪ್ರಕಟಿಸಬೇಕೆಂದಿರುವ **"ಗ್ರಹಯೋಗ"** ಎಂಬ ಗ್ರಂಥದಲ್ಲಿ ವಿವರ ವಿವರವಾಗಿ ವಿವರಿಸಲಾಗುವುದು. ಏಕೆಂದರೆ ಇದೊಂದೇ ವಿಷಯದ ಮೇಲೆ ನೂರಾರು ಪುಟಗಳಷ್ಟು ವಿವರಿಸುವಷ್ಟು ಈ ವಿಷಯದ ವ್ಯಾಪ್ತಿ ಇರುತ್ತದೆ. ಹೇಗೆ ಸಂಗೀತದಲ್ಲಿ ಅಸಂಖ್ಯರಾಗಗಳಿರುವವೋ ಹಾಗೆ ಫಲಜ್ಯೋತಿಷ್ಯ ಶಾಸ್ತ್ರದಲ್ಲಿ ಅರ್ಥಾತ್ ಕುಂಡಲಿ ವಿಜ್ಞಾನದಲ್ಲಿ ಅನೇಕ ಯೋಗಗಳಿವೆ. ಸುಪ್ರಸಿದ್ಧ ಜ್ಯೋತಿಷ್ಯರಾದ "ವರಾಹಮಿಹಿರರು"ತಮ್ಮ ಮಹದ್ಗ್ರಂಥವಾದ ಬೃಹಜ್ಜಾತಕದಲ್ಲಿ ಅನೇಕ ಯೋಗಗಳ ವಿವರಣೆ ಕೊಟ್ಟಿದ್ದಾರೆ. ಆ ಗ್ರಂಥವನ್ನು ಓದಿದಾಗ ಯೋಗಗಳ ಸಂಖ್ಯೆ ಯೋಗಗಳ ಮಹತ್ವದ ಕಲ್ಪನೆ ಬರುತ್ತದೆ.

ಪ್ರಾಚೀನ ಗ್ರಂಥದಲ್ಲಿ ಅನೇಕ ಯೋಗಗಳ ಫಲಗಳನ್ನು ವಿವರಿಸಿದ್ದಾರೆ. ಆದರೆ ಆ ಫಲಗಳ ವಿವರಣೆ ಇಂದಿನ ಸಮಾಜಕ್ಕೆ ಇಂದಿನ ಪರಿಸರಕ್ಕೆ ಹೊಂದಾಣಿಕೆ ಆಗುವುದಿಲ್ಲ. ಏಕೆಂದರೆ ಇಂಥ ಯೋಗಗಳಿದ್ದರೆ ರಾಜನಾಗುತ್ತಾನೆ. ಇಂಥ ಯೋಗಗಳಿದ್ದರೆ ಚಕ್ರವರ್ತಿ, ಇಂಥ ಯೋಗಗಳಿದ್ದರೆ ಸೇನಾಪತಿ, ಕೋತವಾಲ ನಾಗುತ್ತಾನೆ. ಇಂತಂತಹ ಯೋಗಗಳಿದ್ದರೆ ಅಶ್ವವಿದ್ಯ, ಧನುರ್ವಿದ್ಯೆ ಬಾಹುವಿದ್ಯೆ, ಮಲ್ಲವಿದ್ಯೆಗಳಲ್ಲಿ ತಜ್ಞನಿರುತ್ತಾನೆ. ಇವೇ ಮೊದಲಾದ ಫಲಗಳ ವಿವರಣೆ ಇದೆ. ಈ ಎಲ್ಲ ಫಲಗಳು ಇಂದಿನ ಸಮಾಜದ ವ್ಯವಸ್ಥೆಗೆ ಹೊಂದಾಣಿಕೆಯಾಗುವುದಿಲ್ಲ. ಅವುಗಳ ಅರ್ಥವನ್ನು ಇಂದಿನ ಸಮಾಜದ ವ್ಯವಸ್ಥೆಗೆ ಅನುಗುಣವಾಗಿ ಅರ್ಥಹಚ್ಚಿ ಬರೆಯಬೇಕಾಗುತ್ತದೆ. ಈ ಎಲ್ಲ ಯೋಗಗಳ ವಿವರಣೆ ಕೊಡಲು ನೂರಾರು ಪುಟಗಳಷ್ಟು ಬರೆಯಬೇಕಾಗುತ್ತದೆ. ಅಲ್ಲದೆ ಈ ಗ್ರಂಥದ ಉದ್ದೇಶ ವೃತ್ತಿಜ್ಯೋತಿಷಿಗಳ ಮಾರ್ಗದರ್ಶನಕ್ಕಾಗಿ ಬರೆದಿರುವ ಪ್ರಸ್ತುತ ಈ ಅಧ್ಯಾಯದ ಈ ವಿಷಯದ ಚೌಕಟ್ಟಿನಲ್ಲಿ ಮಾತ್ರ ಈ ಶುಭ – ಅಶುಭಯೋಗಗಳ ಗುಣಮಾಪನ ಹೇಗೆ ಮಾಡಬೇಕು ಎಂಬುದನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

ಯೋಗಗಳು ಅನೇಕವಿದ್ದರೂ ಯೋಗಗಳ ಫಲಗಳಲ್ಲಿ ವೈವಿಧ್ಯ ವಿದ್ದರೂ ಗುಣಗಳಲ್ಲಿ ಎರಡೇ ಎರಡು ಪ್ರಕಾರಗಳು ೧) ಶುಭಯೋಗ ೨) ಅಶುಭಯೋಗ ಈ ಎರಡೇ ಎರಡು ಪ್ರಕಾರಗಳನ್ನಾಗಿ ಇವನ್ನು ವಿಂಗಡಿಸ ಬಹುದು.

ಈ ಹಿಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸಲಾದ ಎಲ್ಲ ಅಂಶಗಳನ್ನು ಕ್ರೋಡೀಕರಿಸಿ ನಂತರ ಅದರ ಫಲಿತಾಂಶವಾಗಿ ಬಂದ ಒಟ್ಟುಗುಣಗಳನ್ನು ತೆಗೆದುಕೊಂಡು ಈ ಅಧ್ಯಾಯದಲ್ಲಿ ವಿವರಿಸಿದಂತೆ ಶುಭಯೋಗಗಳಿದ್ದರೆ ಮತ್ತೆ ೫ ಗುಣಗಳನ್ನು ಕೂಡಿಸಬೇಕು. ಅಶುಭ ಯೋಗಗಳಿದ್ದರೆ ೫ ಗುಣ ಗಳನ್ನು ಕಳೆಯಬೇಕು. ಜಾತಕದಲ್ಲಿ ಒಂದೂ ಅಶುಭ ಯೋಗವಿಲ್ಲದಿದ್ದರೆ ೫ ಗುಣಗಳನ್ನು ಕಳೆಯಬಾರದು ಇದರಂತೆ ಒಂದೂ ಶುಭ ಯೋಗವಿಲ್ಲ ದಿದ್ದರೆ ೫ ಗುಣಗಳನ್ನು ಕೂಡಿಸಬಾರದು. ಶುಭ-ಅಶುಭಯೋಗಗಳ ಸಂಖ್ಯೆ ಎಷ್ಟೇ ಇರಲಿ. ಬೇರಿಜು ವಜಾ ಬಾಕಿ ಮಾಡುವಾಗ ಕೇವಲ ೫ ಗುಣಗಳನ್ನು ಕೂಡಿಸಬೇಕು. ಇಲ್ಲವೆ ೫ ಗುಣಗಳನ್ನು ಕಳೆಯಬೇಕು. ಈ ಶುಭ ಅಶುಭ ಯೋಗಗಳಾವವು ? ಇವುಗಳ ಮೌಲ್ಯಮಾಪನ ಹೇಗೆ ಮಾಡಬೇಕು ? ಎಂಬುದನ್ನು ಪರಿಶೀಲಿಸುವಾ.

## ೧) ಶುಭಯೋಗಗಳು

### ೧) ನವಪಂಚಮ ಯೋಗ :

ಒಂದು ಗ್ರಹದಿಂದ ಮತ್ತೊಂದು ಗ್ರಹವು ಪಂಚಮಸ್ಥಾನದಲ್ಲಿ ಇಲ್ಲವೆ ನವಮಸ್ಥಾನದಲ್ಲಿದ್ದರೆ ನವಪಂಚಮ ಯೋಗವೆನ್ನುತ್ತಾರೆ. ಪರಸ್ಪರ ಗ್ರಹ ಗಳಲ್ಲಿಯ ಅಂತರ ಭೇದವು ೧೨೦ ಅಂಶವು ಇಲ್ಲವೆ ೨೪೦ ಅಂಶಗಳಿರಬೇಕು. ಇದು ಶುಭಯೋಗವಿದ್ದು ಈ ಶುಭಯೋಗವಿದ್ದ ಜಾತಕನಿಗೆ ಶುಭಫಲ ದೊರೆಯುತ್ತದೆ. ಗುರು – ಚಂದ್ರ, ಗುರು – ಮಂಗಳ, ಗುರು-ಶುಕ್ರ, ಶುಕ್ರ-ಚಂದ್ರ ಗುರು–ರವಿ ಈ ಗ್ರಹಗಳ ನವಪಂಚಮ ಯೋಗವು ಹೆಚ್ಚು ಶುಭಫಲಗಳನ್ನು ಕೊಡುತ್ತದೆ. ಆದರೆ ಈ ನವಪಂಚಮ ಯೋಗವು ವಿಭಿನ್ನ ಸ್ಥಾನಗಳಲ್ಲಿ ವಿಭಿನ್ನ ಫಲಗಳು ದೊರೆಯುತ್ತವೆ,

## ೨) ಯುತಿಯೋಗ ಅಥವಾ ಸಮಾಂಶಯೋಗ :

ಒಂದೇರಾಶಿಯಲ್ಲಿ ಎರಡು ಇಲ್ಲವೆ ಹೆಚ್ಚಿಗೆ ಗ್ರಹಗಳು ಒಂದೇ ಅಂಶದಲ್ಲಿದ್ದರೆ ಯುತಿಯೋಗ ಇಲ್ಲವೆ ಸಮಾಂಶಯೋಗ ವೆನ್ನುತ್ತಾರೆ. ಈ ಯುತಿಯೋಗದಲ್ಲಿ ಗ್ರಹಗಳ ಅಂಶವು ೩..೨೦ ಅಂಶದ ಒಳಗೆ ಇರಬೇಕು. ಅಂದರೆ ಮಾತ್ರ ಯುತಿಯೋಗದ ಫಲಸಿಗುತ್ತದೆ. ೪ ಅಂಶದ ಮೇಲೆ ಇದ್ದರೆ ಗ್ರಹಯೋಗ ವೆನ್ನುತ್ತಾರೆ. ಗುರು–ಚಂದ್ರ, ಗುರು–ಮಂಗಳ, ಬುಧ ಶುಕ್ರ, ಶುಕ್ರ-ಚಂದ್ರ ಈ ಗ್ರಹಗಳ ಯುತಿಯೋಗವು ಶುಭವಿದ್ದು ಶುಭಫಲಗಳೇ ದೊರೆಯುತ್ತವೆ. ಆದರೆ ಯಾವುದೊಂದು ಗ್ರಹವು ರವಿಯೊಂದಿಗೆ ಇದ್ದರೆ ಆ ಗ್ರಹವು ಅಸ್ತವಾಗುವುದರಿಂದ ಯುತಿಯೋಗದ ಶುಭಫಲದೊರೆಯುವುದಿಲ್ಲ. ಶುಭಗ್ರಹಗಳ ಯುತಿಯೋಗವು ಶುಭದಾಯಕವಿದ್ದರೆ ಪಾಪಗ್ರಹಗಳ ಯುತಿಯೋಗ ಅಶುಭವಿರುತ್ತದೆ. ಅಲ್ಲದೆ ಈ ಯುತಿಯೋಗವು ವಿಭಿನ್ನಸ್ಥಾನಗಳ ಮೇಲಿದ್ದರೆ ವಿಭಿನ್ನ ಫಲಗಳು ದೊರೆಯುತ್ತವೆ.

## ೩) ಪ್ರತಿಯೋಗ ಅಥವಾ ಸಮ್ಮುಖಯೋಗ :

ಯಾವುದೇ ಗ್ರಹದಿಂದ ಮತ್ತೊಂದು ಗ್ರಹವು ಸಪ್ತಮಸ್ಥಾನದಲ್ಲಿ ಅಂದರೆ ಎದುರು ಬದರಾಗಿದ್ದರೆ ಆ ಎರಡು ಗ್ರಹಗಳಲ್ಲಿ ೧೮೦ ಅಂಶಗಳಿದ್ದರೆ ಪ್ರತಿಯೋಗ ಅಥವಾ ಸಮ್ಮುಖಯೋಗ ವೆನ್ನುತ್ತಾರೆ. ಶುಭಗ್ರಹಗಳ (ಗ್ರಹಮೈತ್ರೀ ಇದ್ದು)ಪ್ರತಿಯೋಗವು ಶುಭಫಲವಿದ್ದರೆ. ಪಾಪಗ್ರಹಗಳ ಪ್ರತಿಯೋಗವು ಅಶುಭ ಫಲಕೊಡುತ್ತದೆ. ಅಲ್ಲದೇ ಈ ಪ್ರತಿಯೋಗವು ವಿಭಿನ್ನ ಸ್ಥಾನಗಳ ಮೇಲೆ ವಿಭಿನ್ನ ಫಲಗಳನ್ನು ಕೊಡುತ್ತವೆ.

## ೪) ಗಜಕೇಸರಿ ಯೋಗ :

ಗಜಕೇಸರಿ ಯೋಗವೆಂದರೆ ಗುರು ಹಾಗೂ ಚಂದ್ರ ಇಬ್ಬರೂ ಕೇಂದ್ರದಲ್ಲಿದ್ದರೆ ಗಜಕೇಸರಿ ಯೋಗವೆನ್ನುತ್ತಾರೆ. ಈಯೋಗ ಶುಭವೇನೊನಿಜ. ಆದರೆ ಗುರು, ಚಂದ್ರರು ರಾಶಿಬಲದವರಿರಬೇಕು.(ಸ್ಥಾನಬಲದವರು ಇದ್ದೇ ಇರುತ್ತಾರೆ) ಹಾಗೂ ಅಸ್ತ, ವಕ್ರೀ, ನೀಚ, ಶತ್ರುಕ್ಷೇತ್ರಿ, ಬಾಲ್ಯಾವಸ್ಥೆ ಇರಕೂಡದು ಅಂದರೆ ಮಾತ್ರ ಶುಭ ಫಲದೊರೆಯುತ್ತದೆ. (ಚಂದ್ರನು

ವಕ್ರನಿರುವುದಿಲ್ಲ) ಆದರಲ್ಲಿಯೂ ಮೇಷಲಗ್ನ, ಮಿಥುನಲಗ್ನ, ಕರ್ಕಲಗ್ನ, ವೃಶ್ಚಿಕಲಗ್ನ, ಮೀನಲಗ್ನ ಈ ಐದು ಲಗ್ನಗಳಿಗೆ ಗಜಕೇಸರಿ ಯೋಗವು ಹೆಚ್ಚು ಶುಭಫಲವನ್ನು ಕೊಡುತ್ತದೆ. ಹಾಗೂ ಈ ಐದು ಲಗ್ನಗಳಿಗೆ ವಿಭಿನ್ನ ಪ್ರಕಾರದ ಶುಭಫಲಕೊಡುತ್ತದೆ. ಇದಲ್ಲದೇ ಕೆಲಗ್ರಂಥಕಾರರ ಅಭಿಪ್ರಾಯ ದಲ್ಲಿ ಗಜಕೇಸರಿ ಯೋಗದಲ್ಲಿಯೂ ಕೂಡ ಮೂರು ಪ್ರಕಾರಗಳಿವೆ. ಅವುಗಳ ಎಲ್ಲ ವಿಷಯಗಳ ವಿವರಣೆಯನ್ನು ನಮ್ಮ ಗ್ರಹಯೋಗ ಗ್ರಂಥದಲ್ಲಿ ಬರೆದು ಪ್ರಕಟಿಸಲಾಗುವುದು.

**೫) ರಾಜಯೋಗಗಳು ;**

ರಾಜಯೋಗವೆಂದರೆ ಕೇಂದ್ರ, ತ್ರಿಕೊನಗಳ ರಾಶ್ಯಾಧಿಪತಿಗಳ ಸಂಬಂಧವು. ಲಗ್ನ, ಚತುರ್ಥ, ಸಪ್ತಮ, ದಶಮ ಈ ಸ್ಥಾನಗಳು ಕೇಂದ್ರ ಸ್ಥಾನವಿರುತ್ತವೆ. ಹಾಗೂ ಪಂಚಮ, ನವಮ ಈ ಸ್ಥಾನಗಳು ತ್ರಿಕೋನ ಸ್ಥಾನಗಳು, ಕೇಂದ್ರಸ್ಥಾನಗಳು ವಿಷ್ಣುವಿನ ಸ್ಥಾನ ತ್ರಿಕೋನಸ್ಥಾನಗಳು ಲಕ್ಷ್ಮೀಸ್ಥಾನಗಳೆಂದು, ಇರುವವು. ಈ ಎರಡು ಸ್ಥಾನಗಳ ಒಬ್ಬನೇ ಅಧಿಪತಿಇದ್ದು ಬಲಾಢ್ಯನಿದ್ದರೆ ಅಥವಾ ಗ್ರಹಗಳ ಮೈತ್ರಿಇದ್ದು ಬಲಾಢ್ಯ ಗ್ರಹಗಳಿದ್ದರೆ ಈ ರಾಜಯೋಗದ ಶುಭಫಲಗಳು ದೊರೆಯುತ್ತವೆ. ಈ ರಾಜಯೋಗಗಳು ವಿಭಿನ್ನ ಲಗ್ನಗಳಿಗೆ ವಿಭಿನ್ನ ಗ್ರಹಗಳ ರಾಜಯೋಗಗಳಾಗಿ ರುತ್ತವೆ. ಉದಾಹರಣೆಗೆ ವೃಷಭ, ತುಲಾಲಗ್ನಗಳಿಗೆ ಶನಿಯು ರಾಜಯೋಗ ಕಾರಕನಿದ್ದರೆ,ಕರ್ಕ,ಸಿಂಹಲಗ್ನಗಳಿಗೆ ಮಂಗಳನು ರಾಜಯೋಗಕಾರಕನು.

**೬) ಗದಾಯೋಗವು :**

ಜಾತಕದಲ್ಲಿ (ಕುಂಡಲಿಯಲ್ಲಿ) ಯ ಲಗ್ನ, ಚತುರ್ಥ, ಸಪ್ತಮ ದಶಮ ಈ ನಾಲ್ಕು ಕೇಂದ್ರಸ್ಥಾನಗಳಲ್ಲಿ ಮಾತ್ರ (ಯಾವುದೇ ಕೇಂದ್ರಸ್ಥಾನದಲ್ಲಿ) ಎಲ್ಲ ಗ್ರಹಗಳಿದ್ದರೆ ಗದಾಯೋಗವೆನ್ನುತ್ತಾರೆ. ಆರ್ಥಿಕದೃಷ್ಟಿಯಿಂದ ಈ ಯೋಗವು ಶುಭಯೋಗವಿರುತ್ತದೆ.

**೭) ಶ್ರೀನಾಥಯೋಗ :**

ಸಪ್ತಮೇಶನು ದಶಮೇಶನಿಂದ ಯುಕ್ತನಾಗಿ ದಶಮ ಸ್ಥಾನದಲ್ಲಿದ್ದರೆ (ಆ ದಶಮಸ್ಥಾನವು ಆ ಗ್ರಹಗಳ ಸ್ವಕ್ಷೇತ್ರ ಇಲ್ಲವೆ ಮಿತ್ರಕ್ಷೇತ್ರ ಇದ್ದರೆ)

ಬಲಾಢ್ಯವಾಗಿದ್ದರೆ ಶ್ರೀನಾಥಯೋಗವೆನ್ನುತ್ತಾರೆ. ಇದು ಶುಭಯೋಗ ಎರುತ್ತದೆ.

**೮) ಸುನಫಾಯೋಗ :**

ಚಂದ್ರನ ದ್ವಿತೀಯಸ್ಥಾನದಲ್ಲಿ ಯಾವುದೊಂದು ಶುಭಗ್ರಹವಿದ್ದರೆ ಸುನಫಾಯೋಗವೆನ್ನುತ್ತಾರೆ. ಇದು ಶುಭಯೋಗ ವಿರುತ್ತವೆ.

**೯) ಮಾಲಾಯೋಗ ಅಥವಾ ಮಾಲಿಕಾಯೋಗ :**

ಕುಂಡಲಿ (ಜಾತಕ) ಯ ಯಾವುದೇ ಸ್ಥಾನದಿಂದ ಅನುಕ್ರಮವಾಗಿ (ಮಾಲೆಯಂತೆ) ಸಪ್ತಸ್ಥಾನಗಳವರೆಗೆ ಪ್ರತಿಯೊಂದು ಸ್ಥಾನದಲ್ಲಿಯೂ ರವಿಯಾದಿ ಸಪ್ತಗ್ರಹಗಳು (ರಾಹುಕೇತುಗಳ ಹೊರತಾಗಿ) ಇದ್ದರೆ ಇದಕ್ಕೆ ಮಾಲಾಯೋಗ ಅಥವಾ ಮಾಲಿಕಾಯೋಗ ವೆನ್ನುತ್ತಾರೆ. ಇದು ಕೂಡ ಶುಭಯೋಗವು.

**೧೦) ಶೃಂಗಾಟಕಯೋಗ :**

ಲಗ್ನ, ನವಮ, ಪಂಚಮ ಈ ಮೂರು ಸ್ಥಾನಗಳಲ್ಲಿ (ರಾಹು–ಕೇತು ಗಳ ಹೊರತಾಗಿ) ಎಲ್ಲ ಗ್ರಹಗಳಿರಬೇಕು. ಹೀಗಿದ್ದರೆ ಶೃಂಗಾಟಕಯೋಗ ವೆನ್ನುತ್ತಾರೆ. ಇದು ಅತ್ಯಂತ ಶುಭಯೋಗವು.

ಹೀಗೆ ಮೇಲೆ ಬರೆದ ಹತ್ತು ಶುಭಯೋಗಗಳಲ್ಲದೆ ಯಾವುದೇ ಜಾತಕನ ಜಾತಕದಲ್ಲಿ ೫ ಅಥವಾ ೫ ಕ್ಕಿಂತ ಹೆಚ್ಚು ಗ್ರಹಗಳು ಸ್ವಕ್ಷೇತ್ರಿ, ಉಚ್ಚರಾಶಿ ಯುವರಾಗಿದ್ದಲ್ಲಿ ಕೂಡ ಶುಭಯೋಗವು ಇರುವುದರಿಂದ ಗುಣಗಳನ್ನು ಕೂಡ ಬೇಕು. ಇದಲ್ಲದೇ ಅಮಲಕೀರ್ತಿಯೋಗ, ನರಪತಿಯೋಗ, ಅಮಾತ್ಯ ಯೋಗ, ರಾಜಲಕ್ಷ್ಮೀಯೋಗ, ಹಂಸಯೋಗ, ಪರ್ವತಯೋಗ, ಸಾರ್ವಭೌಮ ಯೋಗ, ಏಕಾವಲಿಯೋಗ, ಚಂದ್ರಾಧಿಯೋಗ, ಲಗ್ನಾಧಿಯೋಗ, ಅಮಲಾ ಯೋಗ, ಮೃದಂಗಯೋಗ, ಶಾರದಾಯೋಗ, ಮತ್ಸ್ಯಯೋಗ, ಖಡ್ಗ ಯೋಗ, ನಾಭಸಯೋಗ, ಹಲಯೋಗ, ಯೂಪಯೋಗ, ಸಮುದ್ರಯೋಗ, ಚಂಡಯೋಗ,ನಾಡಿಯೋಗ,ಅಧಿಯೋಗ, ವಿಹಂಗಮಯೋಗ, ವಜ್ರಯೋಗ,

ಸಿಂಹಾಸನಯೋಗ, ಯವಯೋಗ, ಕಮಲ ಅಥವಾ ಪದ್ಮಯೋಗ, ವಾಪಿ ಯೋಗ, ಇಷುಯೋಗ, ಶಕ್ತಿಯೋಗ, ಕೂಟಯೋಗ ಚಾಪಯೋಗ, ಛತ್ರಯೋಗ, ವಸುಮತಿಯೋಗ, ಅರ್ಧಚಂದ್ರಯೋಗ, ಚಕ್ರಯೋಗ, ಚಂದ್ರಾದಿಯೋಗ, ಅಧಿಯೋಗ, ಅನಫಾಯೋಗ ಅಲ್ಲದೇ ಪಂಚಮಹಾ ಪುರುಷ ಯೋಗಗಳಾದ ರುಚಕ್, ಭದ್ರಕ, ಹಂಸಕ, ಮಾಲವಕ, ಶಶಕ, ಹೀಗೆ ನೂರಾರು ಯೋಗಗಳಿವೆ. ಆದರೆ ಮಾದರಿಗಾಗಿ ಮಾತ್ರ ಹತ್ತು ಶುಭಯೋಗಗಳ ಉಲ್ಲೇಖ ಮಾಡಲಾಗಿದೆ. ಇದರಂತೆ ಯಾವುದೇ ಶುಭ **ಯೋಗ ವಿದ್ದರೂ ಎಷ್ಟೇ ಶುಭಯೋಗ ವಿದ್ದರೂ ಗುಣಮಾಪನ ಮಾಡುವಾಗ ಒಟ್ಟು ಗುಣಗಳಲ್ಲಿ ೫ಗುಣಗಳನ್ನು ಮಾತ್ರ ಕೂಡಿಸ ಬೇಕು.**

### ೨) ಅಶುಭಯೋಗಗಳು

**೧) ಪಾಪಗ್ರಹಗಳ ಯುತಿಯೋಗ :**

ಶನಿ–ಮಂಗಳ, ಶನಿ–ರವಿ, ಶನಿ–ಚಂದ್ರ. ಚಂದ್ರ–ರಾಹು, ರವಿ–ಕೇತು. ಈ ಗ್ರಹಗಳ ಅಂಶಾತ್ಮಕ ಯುತಿಯೋಗವು ಜಾತಕದಲ್ಲಿ ಯಾವುದೇ ಸ್ಥಾನ ದಲ್ಲಿದ್ದರೂ ಅಶುಭವಿರುತ್ತದೆ.

**೨) ಪಾಪಗ್ರಹಗಳ ಪ್ರತಿಯೋಗವು :**

ಶನಿ–ಮಂಗಳ, ಶನಿ–ರವಿ. ಶನಿ–ಚಂದ್ರ ಚಂದ್ರ–ರಾಹು ರವಿ–ಕೇತು ಈ ಗ್ರಹಗಳ ಅಂಶಾತ್ಮಕ ಪ್ರತಿಯೋಗವು ಜಾತಕದಲ್ಲಿಯು ಯಾವುದೇ ಸ್ಥಾನ ದಲ್ಲಿದ್ದರೂ ಅಶುಭವಿರುತ್ತದೆ.

**೩) ಕೇಂದ್ರಯೋಗ :**

ಒಂದು ಗ್ರಹದಿಂದ ಮತ್ತೊಂದು ಗ್ರಹವು ಚತುರ್ಥಸ್ಥಾನದಲ್ಲಾಗಲೀ ದಶಮಸ್ಥಾನದಲ್ಲಾಗಲೀ ಇದ್ದರೆ ಕೇಂದ್ರಯೋಗವೆನ್ನುತ್ತಾರೆ. ಇಲ್ಲಿ ಒಂದು ಗ್ರಹದಿಂದ ಮತ್ತೊಂದು ಗ್ರಹವು ೯೦ ಅಂಶಗಳ ಮೇಲೆ ಇಲ್ಲವೆ ೨೭೦ ಅಂಶಗಳ ಮೇಲೆ ಇದ್ದರೆ ಪೂರ್ಣಕೇಂದ್ರಯೋಗವಾಗುತ್ತದೆ. ಶನಿ–ರವಿ, ಶನಿ–ಚಂದ್ರ, ಶನಿ–ಮಂಗಳರ, ಕೇಂದ್ರ ಯೋಗವು ಅಶುಭವಿರುತ್ತದೆ.

ಅದರಲ್ಲಿಯೂ ಶನಿದೃಷ್ಟಿತ, ಮಂಗಳ, ಶನಿದೃಷ್ಟಿತ, ಚಂದ್ರ ಶನಿ-ದೃಷ್ಟಿತ ರವಿ, ಇದರಂತೆ ಮಂಗಳದೃಷ್ಟಿತ ಶನಿ ಈ ಕೇಂದ್ರಯೋಗವು ಬಹಳೇ ಅಶುಭದಾಯಕ.

**೪) ಷಡಾಷ್ಟಕಯೋಗ :**

ಒಂದುಗ್ರಹದಿಂದ ಮತ್ತೊಂದು ಗ್ರಹವು ಆರನೇಸ್ಥಾನದಲ್ಲಾಗಲಿ ಇಲ್ಲವೆ ಅಷ್ಟಮಸ್ಥಾನದಲ್ಲಿಯಾಗಲೀ ಇದ್ದರೆ ಷಡಾಷ್ಟಕಯೋಗವಾಗುತ್ತದೆ. ಇದು ಅಶುಭಯೋಗವಿದ್ದು, ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರರ ಷಡಾಷ್ಟಕ ಯೋಗವು ಬಹಳೇ ಅಶುಭಯೋಗವು.

**೫) ಕಾಳಸರ್ಪಯೋಗವು :**

ರಾಹು-ಕೇತು ಈ ಉಪಗ್ರಹಗಳ ಮಧ್ಯದಲ್ಲಿ ರವ್ಯಾದಿ ಸಪ್ತಗ್ರಹಗಳು ಇದ್ದರೆ ಸರ್ಪದಿಂದ ಬಂಧಿಸಿದಂತೆ ಆಗುವುದರಿಂದ ಇದಕ್ಕೆ ಕಾಳಸರ್ಪಯೋಗ ವೆನ್ನುತ್ತಾರೆ. ಅನಿಷ್ಟ, ಅಶುಭಯೋಗಗಳಲ್ಲಿ ಈಯೋಗವು ಬಲಿಷ್ಠವಾದಿರುತ್ತದೆ. ಜಾತಕದಲ್ಲಿಯ ಎಂಥೆಂತ ಶುಭಯೋಗವಿದ್ದರೂ ಎಂಥೆಂತ ಬಲಿಷ್ಠ ರಾಜಯೋಗವಿದ್ದರೂ, ಅಷ್ಟೇಏಕೆ ಜಾತಕದಲ್ಲಿ ೫-೬ ಗ್ರಹಗಳು ಸ್ವಕ್ಷೇತ್ರೀ ಇಲ್ಲವೆ ಉಚ್ಚರಾಶಿಯ ಅಲ್ಲದೇ ವಿಭಿನ್ನಲಗ್ನದ ಯೋಗಕಾರಕ ಗ್ರಹಗಳು ಬಲಾಢ್ಯವಾಗಿದ್ದರೂ ಸಹ ಈ ಒಂದೇ ಒಂದು ಕಾಳಸರ್ಪಯೋಗವು ಎಲ್ಲ ಶುಭಫಲವನ್ನು ಹೊಡೆದು ಹಾಕುತ್ತದೆ. ಅಂದಬಳಿಕ ಈ ಅರಿಷ್ಟ ಅಶುಭ ಯೋಗದಪ್ರಖರತೆಯು ಕಲ್ಪನೆಬರುತ್ತದೆ. ಕಾಳಸರ್ಪಯೋಗದಲ್ಲಿಯೂ ಎರಡು ಪ್ರಕಾರಗಳು. ಒಂದು ಸಂಪೂರ್ಣಕಾಳಸರ್ಪಯೋಗ ಇನ್ನೊಂದು ಅಪೂರ್ಣ ಕಾಳಸರ್ಪಯೋಗ. ಅಪೂರ್ಣಕಾಳಸರ್ಪಯೋಗದಲ್ಲಿ ರವ್ಯಾದಿ ಸಪ್ತಗ್ರಹ ಗಳಲ್ಲಿ ಯಾವುದಾದರೊಂದು ಗ್ರಹವು ಸಿಡಿದು ಹೊರಗೆ ಇರುವದು. ಅಂದರೆ ಯಾವುದೇ ಆರುಗ್ರಹಗಳು ರಾಹು-ಕೇತುಗಳ ಮಧ್ಯದಲ್ಲಿದ್ದು ಯಾವುದೊಂದು ಗ್ರಹ ಮಾತ್ರ ಹೊರಗೆ ಇದ್ದರೆ ಅಪೂರ್ಣಕಾಳಸರ್ಪಯೋಗವೆನ್ನುತ್ತಾರೆ. ಇದಾದರೂ ಅಶುಭಯೋಗವಿದ್ದರೂ ಅದರಷ್ಟು ಪ್ರಖರತೆ ಇರುವುದಿಲ್ಲ. ಇನ್ನೊಂದು ಮಹತ್ವದ ಅಂಶವೆಂದರೆ ಮಾಲಾಯೋಗದಲ್ಲಿ ಎಲ್ಲ ನವಗ್ರಹಗಳು ಮಾಲೆಯಂತೆಸಾಲಾಗಿರುತ್ತವೆ. ಆದರೆ ರಾಹು-ಕೇತು

ಗಳ ಮಧ್ಯದಲ್ಲಿ ಇರುವುದಿಲ್ಲ. ಈ ಅಂಶ ಗಮನದಲ್ಲಿಡಬೇಕು. ಏಕೆಂದರೆ ಕಾಳಸರ್ಪಯೋಗವೆಂದು ತಪ್ಪುತಿಳವಳಿಕೆಯಾಗಬಹುದಾಗಿದೆ.

**೬) ಕೇಮ ದ್ರುಮ ಯೋಗ :**

ಚಂದ್ರನ ದ್ವಿತೀಯ ದ್ವಾದಶಸ್ಥಾನದಲ್ಲಿ ರವಿಯು ಹೊರತಾಗಿ ಉಳಿದ ಗ್ರಹಗಳಿದ್ದರೆ ಸುನಫಾ, ಅನಫಾ ಧುರಂಧರಯೋಗಗಳಾಗುವವು. ಮೇಲೆ ಹೇಳಿದ ಮೂರುಯೋಗಗಳಿರದಿದ್ದರೆ ಕೇಮದ್ರುಮಯೋಗವಾಗುವುದು ಅಲ್ಲದೆ ಪಾಪಗ್ರಹಯುಕ್ತ ಚಂದ್ರನು ನೀಚ ನವಾಂಶದಲ್ಲಿದ್ದು, ಭಾಗ್ಯೇಶನದೃಷ್ಟಿ ಯಲ್ಲಿದ್ದರೆ ಕೇಮದ್ರುಮಯೋಗವು. ಇದೂ ಅಲ್ಲದೇ ರಾತ್ರಿಯಲ್ಲಿ ಜನಿಸಿದ ಜಾತಕನ ಜಾತಕದಲ್ಲಿ ಕ್ಷೀಣಚಂದ್ರನು ನೀಚನಿದ್ದರೆ ಕೇಮ ದ್ರುಮಯೋಗ ವಾಗುವುದು. ಬೃಹಸ್ಪತಿ ದೃಷ್ಟಿಗೆಬಳಿಪಡದ ಚಂದ್ರನು ಲಗ್ನ ಇಲ್ಲವೇ ಸಪ್ತಮ ದಲ್ಲಿದ್ದರೆ ಕೇಮದ್ರುಮಯೋಗವಾಗುವುದು.

ಹೀಗೆ ಕೇಮದ್ರುಮಯೋಗದಲ್ಲಿ ಅನೇಕ ಪ್ರಕಾರಗಳಿವೆ. ಅಲ್ಲದೇ ಕೇಮದ್ರುಮಯೋಗಕ್ಕೂ ಅನೇಕ ಅಪವಾದಗಳಿವೆ. ಅದೇನೆ ಇರಲಿ ಕೇಮ ದ್ರುಮಯೋಗವು ಅಶುಭಯೋಗ ವಿರುತ್ತದೆ.

**೭) ಶಕಟಯೋಗ :**

ಚಂದ್ರನಿಂದ ಷಷ್ಠ ಇಲ್ಲವೆ ಅಷ್ಟಮಸ್ಥಾನದಲ್ಲಿ ಗುರುವಿದ್ದು ಈ ಷಷ್ಠ ಸ್ಥಾನವಾಗಲೀ ಅಷ್ಟಮಸ್ಥಾನವಾಗಲಿ ಲಗ್ನ ಕುಂಡಲಿಯಲ್ಲಿ ಕೇಂದ್ರಸ್ಥಾನ ವಿರಬಾರದು ಹೀಗೆ ಇದ್ದಲ್ಲಿ ಶಕಟಯೋಗವಾಗುತ್ತದೆ. ಇದೂಕೂಡ ಅಶುಭ ಯೋಗವು.

**೮) ಅನಫಾ ಯೋಗ :**

ಚಂದ್ರನ ದ್ವಾದಶದಲ್ಲಿ ಶನಿ ಇದ್ದರೆ ಅನಫಾಯೋಗವಾಗುತ್ತದೆ. ಇದು ಕೂಡ ಅಶುಭಯೋಗವು.

**೯) ಪ್ರವ್ರಜ್ಯಾಯೋಗ :**

ಜನ್ಮಕುಂಡಲಿಯಲ್ಲಿ ಅಷ್ಟಮ, ನವಮ, ದ್ವಾದಶ ಈ ಯಾವುದೊಂದು ಸ್ಥಾನದಲ್ಲಿ ಯಾವುದೇ ಐದು ಇಲ್ಲವೆ ಐದಕ್ಕಿಂತ ಅಧಿಕ ಗ್ರಹವಿದ್ದರೆ

ಪ್ರವ್ರಜ್ಯಾಯೋಗ ಎನ್ನುತ್ತಾರೆ. ಇದು ಒಂದು ದೃಷ್ಟಿಯಿಂದ ಅಶುಭ ಯೋಗ. ಈ ಯೋಗವಿದ್ದ ಜಾತಕನು ನಿರ್ಧನ ಇದ್ದು ಸಂಸಾರದಲ್ಲಿ ಅನೇಕ ಸಂಕಟಗಳನ್ನು ಎದುರಿಸಬೇಕಾಗುತ್ತದೆ. ಇನ್ನೊಂದು ದೃಷ್ಟಿಯಲ್ಲಿ ಇದು ವಿರಕ್ತಿಕಕ್ಕೆ ಅನುವು ಮಾಡುತ್ತದೆ. ಇದು ಹೆಚ್ಚಾಗಿ ಸಾಧುಗಳ ಸನ್ಯಾಸಿಗಳ ಜಾತಕದಲ್ಲಿರುತ್ತದೆ.

ಜಾತಕದಲ್ಲಿ ಯಾವುದೇ ಐದು ಅಥವಾ ಆರು ಗ್ರಹಗಳು ನೀಚ, ಶತ್ರುಕ್ಷೇತ್ರಿ, ವೃದ್ಧಾಪ್ಯ, ಬಾಲ್ಯಾವಸ್ಥೆ, ವಕ್ರಗಳಿದ್ದಲ್ಲಿ ಅಶುಭಯೋಗವು. ಇದಲ್ಲದೆ ಶನಿ — ಮಂಗಳ, ರಾಹು,ರವಿ, ಕೇತು ಈ ಐದು ಗ್ರಹಗಳಲ್ಲಿ ಯಾವುದೇ ನಾಲ್ಕು ಗ್ರಹಗಳು ಚತುರ್ಥ, ದಶಮ, ಸಪ್ತಮ, ಲಗ್ನ, ಭಾಗ್ಯ, ಪಂಚಮ ಈ ಯಾವುದೊಂದು ಸ್ಥಾನದಲ್ಲಿರುವದು ಅಶುಭಯೋಗವು. ಇದಲ್ಲದೆ ವಿಭಿನ್ನಲಗ್ನಗಳಿಗೆ ಇರುವ ಯೋಗಕಾರಕ ಗ್ರಹಗಳು ನಿರ್ಬಲವಿದ್ದರೆ ಅಶುಭಯೋಗವು. ಇದೇ ಗ್ರಂಥದ ೪ನೇ ಅಧ್ಯಾಯದ ೩೭ನೇ ಪುಟದಿಂದ ೪೫ನೇ ಪುಟದವರೆಗೆ ಹೇಳಿದುದನ್ನು ಗಮನಿಸಬೇಕು. ಇದಲ್ಲದೇ ದುರುಧರಾಯೋಗ, ಶೃಂಗಾಟಕಯೋಗ, ಶಕಟಯೋಗ, ದಂಡಯೋಗ, ಗೋಲಯೋಗ, ಯುಗಯೋಗ, ಹೀಗೆ ನೂರಾರು ಅಶುಭಯೋಗಗಳಿವೆ. ಆದರೆ ಮಾದರಿಗಾಗಿ ಮಾತ್ರ ಹತ್ತು ಅಶುಭಯೋಗಗಳ ಉಲ್ಲೇಖಮಾಡಲಾಗಿದೆ. **ಇದರಲ್ಲಿ ಯಾವುದೇ ಒಂದು ಅಶುಭಯೋಗವಿದ್ದರೆ ಅಥವಾ ಎಷ್ಟೇ ಅಶುಭಯೋಗವಿದ್ದರೂ ಕೂಡ ೫ ಗುಣಗಳನ್ನು ಕಳೆಯಬೇಕು. ೫ಕ್ಕಿಂತ ಹೆಚ್ಚು ಗುಣಗಳನ್ನು ಕಳೆಯಬಾರದು.**

ಹೀಗೆ ಶುಭ – ಅಶುಭಯೋಗಗಳನ್ನು ತೂಗಿ ಗುಣಮಾಪನ ಮಾಡಬೇಕು.



# ೧೧

## ಕುಂಡಲಿ ವರ್ಗೀಕರಣ

ಈ ಹಿಂದಿನ ಹತ್ತು ಅದ್ಯಾಯಗಳಲ್ಲಿ ಸೂಚಿಸಿದಂತೆ ಅಂತಿಮ ಮೌಲ್ಯ ಮಾಪನ ಮಾಡಿದಾಗ ಯಾವ ಕುಂಡಲಿಗೆ (ಜಾತಕಕ್ಕೆ) ಎಷ್ಟು ಗುಣಗಳು ಬಂದಿವೆ ಎಂಬ ಲೆಕ್ಕಾಚಾರ ಸ್ಪಷ್ಟವಾಗುತದೆ. ಈ ಅಂತಿಮ ಗುಣಗಳ ಕ್ರೋಡೀಕರಣದ ಕಾರ್ಯ ಮುಗಿದ ನಂತರ ಕುಂಡಲಿ (ಜಾತಕ)ವರ್ಗೀಕರಣ (ವಿಧಾನವನ್ನು) ಹೇಗೆ ಮಾಡಬೇಕೆಂಬ ಅಂತಿಮ ಪ್ರಕ್ರಿಯೆ ಈಅಧ್ಯಾಯದಲ್ಲಿ ವಿವರಿಸಲಾಗಿದೆ.

ಈ ವರ್ಗೀಕರಣದ ಕಾರ್ಯ ಒಂದು ದೃಷ್ಟಿಯಿಂದ ಯಾಂತ್ರಿಕವಾದುದು. ಏಕೆಂದರೆ ಆಯಾ ಅಧ್ಯಾಯದಲ್ಲಿ ನಿರ್ಧರಿಸಿದ ಗೊತ್ತುಪಡಿಸಿದ ಗುಣಗಳಿಗೆ ಆಯಾ ಜಾತಕಕ್ಕೆ ಬಂದ ಒಟ್ಟು ಗುಣಗಳನ್ನು ತೆಗೆದುಕೊಂಡು ಎಷ್ಟುಗುಣಗಳು ಬಂದಿವೆ ಎಂಬುದನ್ನು ಮೊದಲು ಖಚಿತಪಡಿಸಿಕೊಳ್ಳಬೇಕು. ಆ ಬಳಿಕ ಆ ಕುಂಡಲಿಯನ್ನು ಹೇಗೆ ವರ್ಗೀಕರಿಸಬೇಕೆಂಬುದನ್ನು ಈಅಧ್ಯಾಯದಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ

**ಗುಣಗಳು** **ವರ್ಗ**

೧) ೧೦೦ಕ್ಕೆ ೮೦ ಕ್ಕಿಂತಲೂ ಹೆಚ್ಚು ಗುಣಗಳನ್ನು ಪಡೆದರೆ ಎ೧ ಗ್ರೇಡ
೨) ೧೦೦ಕ್ಕೆ ೬೦ರಿಂದ ೮೦ರವರೆಗೆ ಗುಣಗಳನ್ನು ಪಡೆವರೆ ಎ ಗ್ರೇಡ
೩) ೧೦೦ಕ್ಕೆ ೫೦ರಿಂದ ೬೦ರ ವರೆಗೆ ಗುಣಗಳನ್ನು ಪಡೆದರೆ ಬಿ ಗ್ರೇಡ
೪) ೧೦೦ಕ್ಕೆ ೩೫ರಿಂದ ೫೦ರವರೆಗೆ ಗುಣಗಳನ್ನು ಪಡೆವರೆ ಸಿ ಗ್ರೇಡ
೫) ೩೫ ಹಾಗೂ ೩೫ಕ್ಕಿಂತ ಕಡಿಮೆ ಗುಣಗಳನ್ನು ಪಡೆದರೆ ಡಿ ಗ್ರೇಡ

ಹೀಗೆ ಈ ೧೧ನೇ ಅಧ್ಯಾಯದಲ್ಲಿ ಕುಂಡಲೀ ವರ್ಗೀಕರಣದ ವಿಧಾನ-ವಿರುತ್ತದೆ.



# ೧೨

## ಮಾದರಿಯ ಕುಂಡಲಿ (ಜಾತಕ) ಗಳು

ಒಂಬತ್ತನೇಯ ಅಧ್ಯಾಯದಿಂದ ಹತ್ತನೇಯ ಅಧ್ಯಾಯದವರೆಗೆ ಆರೋಗ್ಯ, ಆಯುರ್ಮಾನ,ಮಾತೃಸೌಖ್ಯ, ಪತಿ–ಪತ್ನೀ ಸೌಖ್ಯ, ಆರ್ಥಿಕ ಸ್ಥಿತಿ, ಶಿಕ್ಷಣ, ಉದ್ಯೋಗ, ಸಂತಾನ, ಭಾಗ್ಯ, ಶತ್ರು-ಮಿತ್ರರ, ಸಹೋದರ– ಸಹೋದರಿಯರ ಸೌಖ್ಯ,ಶುಭ–ಅಶುಭ ಯೋಗಗಳು ಹೀಗೆ ಹತ್ತು ಅಧ್ಯಾಯಗಳಲ್ಲಿ ಕುಂಡಲಿ ಗುಣಪಾಪನ ಹೇಗೆ ಮಾಡಬೇಕೆಂಬುದನ್ನು ವಿವರಿಸಿ, ಹನ್ನೊಂದ-ನೆಯ ಅಧ್ಯಾಯದಲ್ಲಿ ಕುಂಡಲೀವರ್ಗೀಕರಣ ಹೇಗೆ ಮಾಡಬೇಕೆಂಬುದನ್ನು ವಿವರಿಸಿದ್ದಾಯಿತು. ಇನ್ನು ಈ ಹನ್ನೆರಡನೆಯ ಅಧ್ಯಾಯದಲ್ಲಿ ಮೊದಲನೆಯ ಹನ್ನೊಂದು ಅಧ್ಯಾಯದಲ್ಲಿ ಅಭ್ಯಾಸಮಾಡಿದ ತತ್ವಗಳನ್ನು, ಸೂತ್ರಗಳನ್ನು ಪ್ರಯೋಗಿಸುವ ರೀತಿಯನ್ನು ಸೂಚಿಸಿ ಮಾರ್ಗದರ್ಶನ ಮಾಡಲಾಗಿದೆ. ಆದರೆ ಇಲ್ಲಿ ಬಳಸಲಾದ ಮಾದರೀಯ ಕುಂಡಲಿಗಳು ಕಲ್ಪನೆಯ ಕುಂಡಲಿ (ಜಾತಕ)ಗಳಿರದೇ ನಮ್ಮ ವೃತ್ತಿಯಲ್ಲಿ ಬಂದ ವ್ಯಕ್ತಿಗಳ ಜಾತಕವಿರುತ್ತವೆ. ಆದರೆ ಆ ಎಲ್ಲ ವ್ಯಕ್ತಿಗಳ ಹೆಸರನ್ನು ಕೊಡದೆ ಕೆಲವ್ಯಕ್ತಿಗಳ ಹೆಸರುಗಳನ್ನು ಮಾತ್ರಕೊಡಲಾಗದೆ.

### ಮಾದರಿ ೧

೪/೫–೯–೧೯೦೭ನೇ ಇಸ್ವಿ ಪ್ರಾತಃಕಾಲ ೪–೩೦ಕ್ಕೆ ಕರ್ಕಲಗ್ನ ಕರ್ಕ ರಾಶಿ ಜನಿಸಿದ ಜಾತಕನ ಜಾತಕ ಹೀಗಿದೆ.

ಮುಂದೆ ಕೊಟ್ಟ ಜಾತಕವನ್ನು ಒಮ್ಮೆ ಸಿಂಹಾವಲೋಕನ ಮಾಡಿರಿ. ಜಾತಕದಲ್ಲಿಯ ಗ್ರಹಗತಿಯನ್ನು ಒಮ್ಮೆ ಪರಿಶೀಲಿಸಿರಿ. ಕರ್ಕಲಗ್ನದ ಲಗ್ನದಲ್ಲಿ ಗುರು–ಚಂದ್ರರು ಸಿಂಹರಾಶಿಯ ದ್ವಿತೀಯಸ್ಥಾನದಲ್ಲಿ ರವಿ, ಬುಧ,




ಶುಕ್ರರು ಷಷ್ಠಸ್ಥಾನದಲ್ಲಿ ಧನುರಾಶಿಯ ಕುಜ, ಕೇತು ಗ್ರಹಗಳು. ಅಷ್ಟಮ ದಲ್ಲಿ ಕುಂಭರಾಶಿಯ ಶನಿಮಹಾರಾಜರು, ವ್ಯಯಸ್ಥಾನದಲ್ಲಿ ಮಿಥುನರಾಶಿಯ ರಾಹು ಹೀಗೆ ಈ ಜಾತಕದ ಗ್ರಹ ಸ್ಥಿತಿ ವಿರುತ್ತದೆ.

ಇನ್ನು ಈ ಜಾತಕವನ್ನು ಈ ಗ್ರಂಥದಲ್ಲಿ ವಿವರಿಸಿದಂತೆ ದಶಮ ದೃಷ್ಟಿಕೋನಗಳಿಂದ ಮೌಲ್ಯಮಾಪನ ಮಾಡುವ ಮೊದಲು ಜಾತಕನ ಉದ್ಯೋಗ ನೌಕರಿ, ಶೈಕ್ಷಣಿಕ ಅರ್ಹತೆ ಹೇಗಿರಬೇಕೆಂಬುದನ್ನು ತುಸು ಯೋಚಿಸಿರಿ. ಕರ್ಕಲಗ್ನದ ಲಗ್ನದಲ್ಲಿ ಗುರು– ಚಂದ್ರರಿರುವುದರಿಂದ ಇವರು ಶಿಕ್ಷಣ ಕ್ಷೇತ್ರದಲ್ಲಿರಬೇಕು. ಅದರಲ್ಲಿಯೂ ಶಿಕ್ಷಕ, ಅಧ್ಯಾಪಕ ವೃತ್ತಿಯವರಿರಬೇಕು. ಇಲ್ಲವೇ ನ್ಯಾಯಾಧೀಶರೂ, ಸಲಹೆಗಾರರೂ ಇರ ಬೇಕು. ಇಲ್ಲವೆ ಕರ್ಕಲಗ್ನದ ಯೋಗಕಾರಕ ಗ್ರಹವೂ ದಶಮಾಧಿಪತಿಯೂ ಆದಕುಜನು ಬಲಾಢ್ಯವಾಗಿ ಷಷ್ಠದಲ್ಲಿ ವಿರಾಜನಾಗಿರುವುದರಿಂದ ಇವರು ಮಿಲಟರಿ,ನೇವ್ಹಿ ಎರಫೋರ್ಸ, ಪೋಲಿಸ, ಈ ಖಾತೆಗಳಲ್ಲಿ ಅಧಿಕಾರಿ ಇರಬೇಕು. ಇಲ್ಲವೆ ಸರ್ಜನ್ ಇಂಜನೀಯರನಿರಬೇಕು. ಇಲ್ಲವೆ ಸಿಂಹರಾಶಿಯ ಸೂರ್ಯ ನಿರುವುದರಿಂದ ಇವರ ರಾಜಕಾರಣಿ, ಸಮಾಜಕಾರ್ಯಕರ್ತರಿರಬೇಕು. ಹೀಗೆ ನೀವು ಯೋಚಿಸುತ್ತಿರಬೇಕು. ಅಲ್ಲವೆ? ನಿಮ್ಮ ಊಹೆ,ತರ್ಕ,ಸಮಂಜಸವಿದೆ. ಈ ಜಾತಕ ಯಾರದಂಗೊತ್ತೆ? ಇವರು ಹೆಸರಾಂತ ಶಿಕ್ಷಣ ತಜ್ಞರು

ಕನ್ನಡಿಗರೂ ಆದ ದಿವಂಗತ ಜೆ.ಪಿ. ನಾಯಕರದು. ಉಚ್ಚರಾಶಿಯ ಗುರುವು ಸ್ವಕ್ಷೇತ್ರಿ ಚಂದ್ರನೊಂದಿಗೆ ಲಗ್ನದಲ್ಲಿ ವಿರಾಜಮಾನನಾಗಿದ್ದಾನೆ. ಅಂತೆಯೇ ಇವರು ಶಿಕ್ಷಣಕ್ಷೇತ್ರದಲ್ಲಿ ಪ್ರವೇಶಿಸಿ ಶಿಕ್ಷಕ ಅಧ್ಯಾಪಕ ವೃತ್ತಿಯಲ್ಲಿದ್ದರಲ್ಲದೇ ಕೇಂದ್ರ ಸರಕಾರದ ಶಿಕ್ಷಣ ಸಲಹೆಗಾರರು ಇದ್ದರು. ಇಷ್ಟೇ ಅಲ್ಲಾ ಕೇಂದ್ರ ಸರಕಾರ ರಚಿಸಿದ ಕೋಠಾರಿ ನೇತೃತ್ವದ ಶಿಕ್ಷಣ ಆಯೋಗದ ಕಾರ್ಯದರ್ಶಿ ಎಂದು ಕೆಲಸ ಮಾಡಿದ್ದಾರೆ. ಇದು ಅಲ್ಲದೇ ಭಾರತದಲ್ಲಿ ಶಿಕ್ಷಣಯೋಜನೆ, ಶಿಕ್ಷಣದ ಮೇಲಿನ ವಿಚಾರ, ಮೊದಲಾದ ಮೌಲಿಕ ಗ್ರಂಥಗಳನ್ನು ಬರೆದಿದ್ದಾರೆ. ಇದೇ ಗ್ರಂಥದ ೫ನೇ ಅಧ್ಯಾಯದ ೫೬–೫೭ ಪುಟಗಳಲ್ಲಿ ವಿವರಿಸಿದಂತೆ ಇವರ ಜಾತಕದಲ್ಲಿ ಬುಧನಿಗಿಂತ ಗುರುವು ಬಲಾಢ್ಯನಿರುವುದರಿಂದ ಪಾಂಡಿತ್ಯಪೂರ್ಣಮೌಲಿಕ ಗ್ರಂಥರಚನೆಗೆ ಕಾರಣವಾಯಿತು. ಹಾಗೆ ನೋಡಿದರೆ ಈ ಎಲ್ಲ ವಿವೇಚನೆ ಈ ಗ್ರಂಥದ ವಿಷಯದವ್ಯಾಪ್ತಿಗೆ ಒಳಪಡುವುದಿಲ್ಲ. ವ್ಯಕ್ತಿಯಾರೇ ಇರಲಿ ಅವರವರ ಜಾತಕದ ಮೌಲ್ಯಮಾಪನವನ್ನು ಹೇಗೆ ಮಾಡಬೇಕೆಂಬುದನ್ನು ಮಾದರಿಯ ಕುಂಡಲಿಯೊಂದಿಗೆ ವಿವೇಚಿಸುವದೇ ಈ ಅಧ್ಯಾಯದ ಉದ್ದೇಶವಿರುವುದರಿಂದ ಮೇಲಿನ ಜಾತಕದ ಮೌಲ್ಯಮಾಪನವನ್ನು ವಿವರಿಸುವಾ.

## ೧) ಆರೋಗ್ಯ ಹಾಗೂ ಆಯುರ್ಮಾನಕ್ಕೆ ಪಡೆದ ಗುಣಗಳು :

ಮೇಲಿನ ಜಾತಕದ ಮೌಲ್ಯ ಮಾಪನ ಮಾಡುವಾಗ ಪ್ರಪ್ರಥಮವಾಗಿ ಆರೋಗ್ಯ ಹಾಗೂ ಆಯುರ್ಮಾನದ ದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಮೊದಲು ಪರಿಶೀಲಿಸುವಾ. ಒಂದನೇ ಅಧ್ಯಾಯದ ೨ನೇ ಪುಟದಿಂದ ೧೨ನೇಯ ಪುಟದ ವರೆಗೆ ವಿವರಿಸಿದಂತೆ ಆರೋಗ್ಯದ ಬಗೆಗೆ ಗುಣಮಾಪನಮಾಡುವಾಗ ಲಗ್ನ ಹಾಗೂ ಲಗ್ನೇಶನ ಬಲಾಬಲಕ್ಕೆ ೨ ಗುಣಗಳು. ಷಷ್ಠಸ್ಥಾನ ಹಾಗೂ ಷಷ್ಠೇಶನ ಬಲಾಬಲಕ್ಕೆ ೨ ಗುಣಗಳು ಅಷ್ಟಮಸ್ಥಾನ ಹಾಗೂ ಅಷ್ಟಮೇಶನ ಬಲಾಬಲಾಕ್ಕೆ ೨ ಗುಣಗಳು. ಸೂರ್ಯನಿಗೆ ೨ ಹಾಗೂ ಚಂದ್ರನಿಗೆ ೨ ಹೀಗೆ ೧೦ ಗುಣಗಳನ್ನು ನಿರ್ಧರಿಸಲಾಗಿದ್ದು ಮೇಲಿನ ಜಾತಕಕ್ಕೆ ಎಷ್ಟುಗುಣಗಳು ಲಭಿಸುತ್ತವೆ ಎಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದಲ್ಲಿ ಲಗ್ನದಲ್ಲಿ ಅಂದರೆ ತನು ಸ್ಥಾನದಲ್ಲಿ ಗುರು, ಚಂದ್ರರು ಇದ್ದಾರೆ. ಇದು ಕರ್ಕಲಗ್ನವಿದ್ದು ಗುರುವು ಲಗ್ನಾಧೀಶ ನೊಂದಿಗೆ ಲಗ್ನದಲ್ಲಿದ್ದಾನೆ ಅಂದರೆ ಮಿತ್ರಕ್ಷೇತ್ರಿ. ಆದುದರಿಂದ ೧ ಗುಣ ಲಭಿಸುತ್ತದೆ. ಇನ್ನು ಲಗ್ನೇಶನಾದ ಚಂದ್ರನು ಲಗ್ನದಲ್ಲಿಯೇ ಇದ್ದಾನೆ ಅಂದರೆ ತನ್ನಸ್ಥಾನದಲ್ಲಿಯೇ ಇದ್ದಾನೆ ಆದುದರಿಂದ ೧ ಗುಣಲಭಿಸುತ್ತದೆ.

ಷಷ್ಠಸ್ಥಾನದಲ್ಲಿ ಬಲಾಢ್ಯ ಮಂಗಳನಿದ್ದಾನೆ. ಷಷ್ಠಸ್ಥಾನ ಪಾಪಗ್ರಹ ಗಳಿಗೆ ಪೂರಕಸ್ಥಾನವು ಅಲ್ಲದೇ ಷಷ್ಠಸ್ಥಾನವಿದು ಗುರುವಿನ ಸ್ಥಾನ. ಗುರು–ಮಂಗಳರ ಮೈತ್ರೀಇರುವುದರಿಂದ ೧ ಗುಣಲಭಿಸುತ್ತದೆ. ಇದು ಷಷ್ಠೇಶನಾದ ಗುರುವು ಉಚ್ಚರಾಶಿಯುವನಾಗಿ ಲಗ್ನದಲ್ಲಿರುವುದರಿಂದ ೧ಗುಣ ಲಭಿಸುತ್ತದೆ.

ಅಷ್ಟಮಸ್ಥಾನದಲ್ಲಿ ಸ್ವಕ್ಷೇತ್ರೀಶನಿಯು ಇದ್ದಾನೆ.ಸ್ವಕ್ಷೇತ್ರಿಶನಿ ಇರುವ ದರಿಂದ ೧ ಗುಣ ಬರಬೇಕಾಗಿತ್ತು. ಆದರೆ ರವಿಯ ದೃಷ್ಟಿಯೊಂದಿಗಿರುವದ ರಿಂದ ೧/೨ ಗುಣಲಭಿಸುತ್ತದೆ. ಇನ್ನು ಅಷ್ಟಮೇಶನಾದ ಶನಿಯು ಮೂಲ ತ್ರಿಕೋಣವಿರುವುದರಿಂದ ಬಲಾಢ್ಯನಿದ್ದಾನೆ. ಆದುದರಿಂದ ೧ ಗುಣ ಬರ ಬಹುದಾಗಿತ್ತು. ಆದರೆ ಅಷ್ಟಮೇಶನಾದ ಶನಿಯು ರವಿಯೊಂದಿಗೆ ಪ್ರತಿ ಯೋಗ ವಿರುವುದರಿಂದ ೧/೩ ಗುಣ ಲಭಿಸುತ್ತದೆ.

ಇನ್ನು ಸಿಂಹರಾಶಿಯ ಸ್ವಕ್ಷೇತ್ರೀ ಸೂರ್ಯನು ಬಲಾಢ್ಯನಿದ್ದಾನೆ. ಆದುದರಿಂದ ೨ ಗುಣಗಳು ಲಭಿಸಬಹುದಾಗಿತ್ತು. ಆದರೆ ಸೂರ್ಯನ ಶತ್ರು ಶನಿಯೊಂದಿಗೆ ಪ್ರತಿಯೋಗ ಮಾಡುತ್ತಿದ್ದಾನ. ಅಲ್ಲದೆ ಇಬ್ಬರೂ ಸಮ ಬಲರು(ಇಬ್ಬರೂ ರಾಶಿಬಲದವರಿದ್ದಾರೆ).ಆದುದರಿಂದ ೧ಗುಣಲಭಿಸುತ್ತದೆ.

ಇನ್ನು ಚಂದ್ರನ ಬಲಾಬಲದ ಬಗೆಗೆನೋಡಲು ಸ್ವಕ್ಷೇತ್ರಿ ಲಗ್ನದಲ್ಲಿ ವಿರಾಜನಾಗಿದ್ದಾನೆ, ಗುರುವಿನೊಂದಿಗೆ ಬಲಿಷ್ಠನಿದ್ದಾನೆ. ಆದುದರಿಂದ ೨ ಗುಣಗಳಿಗೆ ೨ ಗುಣಗಳು ಲಭಿಸಿವೆ.

ಲಗ್ನ ಹಾಗೂ ಲಗ್ನೇಶನ ಬಲಾಬಲಕ್ಕೆ ೨ ಗುಣಗಳು. ಷಷ್ಠಸ್ಥಾನದಲ್ಲಿರುವ ಗ್ರಹದ ಬಲಾಬಲ ಹಾಗೂ ಷಷ್ಠೇಶನ ಬಲಾಬಲಕ್ಕೆ ೨ ಗುಣಗಳು. ಅಷ್ಟಮಸ್ಥಾನದಲ್ಲಿಯ ಗ್ರಹದ ಬಲಾಬಲ ಹಾಗೂ ಅಷ್ಟಮೇಶನ ಬಲಾಬಲಕ್ಕೆ ೧ ಗುಣ. ಸೂರ್ಯನ ಬಲಾಬಲಕ್ಕೆ ೧ ಗುಣ. ಚಂದ್ರನ ಬಲಾ-ಬಲಕ್ಕೆ ೨ ಗುಣ. ಹೀಗೆ ಆರೋಗ್ಯದೃಷ್ಟಿಯಿಂದ ಈ ಜಾತಕಕ್ಕೆ ೧೦ ಗುಣಗಳಲ್ಲಿ ೮ ಗುಣಗಳು ಲಭಿಸಿವೆ.

ಇನ್ನು ಲಗ್ನ ಲಗ್ನೇಶ, ಷಷ್ಠ ಷಷ್ಠೇಶ, ಅಷ್ಟಮ, ಅಷ್ಟಮೇಶ, ಸೂರ್ಯ, ಚಂದ್ರ ಈ ಎಂಟು ಸಂಗತಿಗಳಲ್ಲಿ ಮುಖ್ಯವಾಗಿ ಅಷ್ಟಮಸ್ಥಾನ ಹಾಗೂ ಅಷ್ಟಮೇಶರ ಬಲಾಬಲ ಮಧ್ಯಮವಿದೆ. ಆದುದರಿಂದ ಈ ಜಾತಕವು ಮಧ್ಯಮಾಯುವಿರುತ್ತದೆ.

## ೨) ಮಾತೃ ಸೌಖ್ಯಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರೀ ಒಂದನೇ ಜಾತಕಕ್ಕೆ ಮಾತೃಸೌಖ್ಯ ದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಕಂಡುಕೊಳ್ಳಲು ಎರಡನೇ ಅಧ್ಯಾಯದ ೧೮ನೇ ಪುಟದಿಂದ ೨೪ನೇ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಮಾತೃಸೌಖ್ಯದ ವಿಷಯವಾಗಿ ಚತುರ್ಥಸ್ಥಾನದಲ್ಲಿಯ ಗ್ರಹ (ಗ್ರಹಗಳ) ದ ಬಲಾಬಲ, ಚತುರ್ಥೇಶನ ಬಲಾಬಲ, ಚಂದ್ರನ ಬಲಾಬಲ, ಶುಕ್ರನ ಬಲಾಬಲ, ಗುರುವಿನ ಬಲಾಬಲ, ಹಾಗೂ ಮಾತೃಸೌಖ್ಯದ ಪೋಷಕಯೋಗಗಳ ಬಲಾಬಲ. ಈ ಐದು ಸಂಗತಿಗಳನ್ನು ತೂಗಿನೋಡಬೇಕು. ಹಾಗೂ ಮಾತೃಸೌಖ್ಯಕ್ಕೆ ನಿರ್ಧರಿಸಿದ ೧೫ ಗುಣಗಳಲ್ಲಿ ಚತುರ್ಥಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ಚತುರ್ಥೇಶನ ಬಲಾಬಲಕ್ಕೆ ೪ ಗುಣಗಳನ್ನು, ಬಲಾಢ್ಯ ಚಂದ್ರನಿಗೆ ೪ ಗುಣಗಳನ್ನು, ಬಲಾಢ್ಯ ಶುಕ್ರನಿಗೆ ೩ ಗುಣಗಳನ್ನು, ಬಲಾಢ್ಯಗುರುವಿಗೆ ೨ ಗುಣಗಳನ್ನು ಮಾತೃ. ಪೋಷಕಯೋಗಗಳಿಗೆ ೨ ಗುಣಗಳನ್ನು ನಿಗದಿಸಿದ್ದು ಮೇಲೆ ಬರೆದ ಜಾತಕಕ್ಕೆ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ.

ಮೇಲಿನ ಜಾತಕದಲ್ಲಿ ಚತುರ್ಥಸ್ಥಾನದಲ್ಲಿ ಒಂದೂ ಗ್ರಹವಿರುವುದಿಲ್ಲ ಆದಕಾಗಿ ಮೀಸಲಾದ ೨ ಗುಣಗಳಲ್ಲಿ ಒಂದೂ ಗುಣಲಭಿಸುವುದಿಲ್ಲ ಇನ್ನು

ಚತುರ್ಥೇಶನು ಸ್ಥಾನಬಲವವನಿದ್ದರೆ ರಾಶಿ ಬಲದವನಾಗಿರುವುದಿಲ್ಲ. ಆದಕ್ಕಾಗಿ ೨ ಗುಣಗಳಲ್ಲಿ ೧ ಗುಣಮಾತ್ರ ಲಭಿಸುತ್ತದೆ.

ಮಾತೃಸೌಖ್ಯದ ಪೋಷಕ ಗ್ರಹವಾದ ಚಂದ್ರನು ಬಲಾಢ್ಯನಾಗಿ ಗುರುವಿನೊಂದಿಗೆ ಲಗ್ನದಲ್ಲಿದ್ದಾನೆ. ಅಂದರೆ ರಾಶಿಬಲದವನೂ ಸ್ಥಾನಬಲದವನೂ ಇದ್ದಾನೆ. ಆದಕ್ಕಾಗಿ ೪ ಗುಣಗಳಲ್ಲಿ ೪ ಗುಣಗಳುಲಭಿಸುವವು. ಇದರಂತೆ ಮಾತೃಸೌಖ್ಯಕ್ಕೆ ಪೋಷಕ ಇನ್ನೊಂದು ಗ್ರಹವಾದ ಶುಕ್ರನು ಸ್ಥಾನಬಲದವನಿದ್ದು ರಾಶಿಬಲದವನಿರುವುದಿಲ್ಲ. ಆದಕ್ಕಾಗಿ ೩ ಗುಣಗಳಲ್ಲಿ $1\frac{1}{2}$ ಗುಣಗಳು ಲಭಿಸುವವು. ಇದಲ್ಲದೇ ಮಾತೃಸೌಖ್ಯಕ್ಕೆ ಪೋಷಕ ಮತ್ತೊಂದು ಗ್ರಹವಾದ ಗುರುವು ಬಲಾಢ್ಯನಿದ್ದಾನೆ. ರಾಶಿಬಲದವ ಸ್ಥಾನಬಲದವನಿದ್ದ ಕಾರಣ ೨ ಗುಣಗಳಿಗೆ ೨ ಗುಣಲಭಿಸುವವು. ಮಾತೃಸೌಖ್ಯಕ್ಕೆ ಪೋಷಕ ಯೋಗಗಳಾದ ಗುರು–ಚಂದ್ರರ ಯೋಗಕ್ಕಾಗಿ ೨ ಗುಣಗಳಲ್ಲಿ ೨ ಗುಣಗಳು ಲಭಿಸುವವು ಹೀಗೆ ಮಾತೃಸೌಖ್ಯದ ೧೫ ಗುಣಗಳಲ್ಲಿ $10\frac{1}{2}$ ಗುಣಗಳು ಲಭಿಸಿವೆ.

### ೩) ಪತಿ ಹಾಗೂ ಪತ್ನೀಸೌಖ್ಯಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಪಾದರೀ ಒಂದನೇ ಜಾತಕಕ್ಕೆ ಪತ್ನೀಸೌಖ್ಯದ ವಿಷಯವಾಗಿ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಪರಿಶೀಲಿಸುವಾ. ಮೂರನೇ ಅಧ್ಯಾಯದ ೨೫ನೇ ಪುಟದಿಂದ ೩೧ನೇ ಪುಟದವರೆಗೆ ವಿವರಿಸಿದಂತೆ ಪತ್ನಿಸೌಖ್ಯಕ್ಕೆ ೧೫ ಗುಣಗಳಿದ್ದು ಅವುಗಳಲ್ಲಿ ಸಪ್ತಮಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ಸಪ್ತಮೇಶನ ಬಲಾಬಲಕ್ಕೆ ೬ ಗುಣಗಳು. ಶುಕ್ರನ ಬಲಾಬಲಕ್ಕೆ ೪ ಗುಣಗಳು ಗುರುವಿನ ಬಲಾಬಲಕ್ಕೆ ೩ ಗುಣಗಳು ಪತಿ,ಪತ್ನೀಸೌಖ್ಯದ ಶುಭಯೋಗಗಳಿಗೆ ೨ ಗುಣಗಳು ಹೀಗೆ ೧೫ ಗುಣಗಳಿದ್ದು ಅವುಗಳಲ್ಲಿ ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಲಭಿಸುತ್ತವೆ ಎಂಬುದನ್ನು ಪರಿಶೀಲಿಸುವಾ.

ಸಪ್ತಮಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ ವಾದುದರಿಂದ ಸಪ್ತಮಸ್ಥಾನದಲ್ಲಿರುವಗ್ರಹಕ್ಕೆ ಮೀಸಲಾದ ಎರಡು ಗುಣಗಳಿಗೆ ಒಂದೂ

ಗುಣಲಭಿಸುವದಿಲ್ಲ ಆದರೆ ಸಪ್ತಮೇಶನು ಸ್ವಕ್ಷೇತ್ರಿ ಇರುವನೇನೋ ನಿಜ ಅಂದರೆ ರಾಶಿಬಲದವ. ಆದರೆ ಸ್ಥಾನಬಲದವನಿರುವುದಿಲ್ಲ. ಅಲ್ಲದೇ ರವಿಯೊಂದಿಗೆ ಪ್ರತಿಯೋಗ ಮಾಡುತ್ತಾನೆ. ಹೀಗಾಗಿ ೪ ಗುಣಗಳಲ್ಲಿ ೨ ಗುಣಗಳು ಲಭಿಸುತ್ತವೆ.

ಇನ್ನು ನೈಸರ್ಗಿಕವಾಗಿ ಪತ್ನೀಸೌಖ್ಯದ ಪೋಷಕ ಗ್ರಹವಾದ ಶುಕ್ರನು ಸ್ಥಾನಬಲದವ (ದ್ವಿತೀಯಸ್ಥಾನ) ನಿದ್ದಾನೆ. ಆದರೆ ರಾಶಿಬಲದವನಿರುವುದಿಲ್ಲ. ಆದುದರಿಂದ ೪ ಗುಣಕ್ಕೆ ೨ ಗುಣಗಳು ಲಭಿಸುತ್ತವೆ.

ಪತ್ನಿಸೌಖ್ಯಕ್ಕೆ ವೈವಾಹಿಕ ಜೀವನ ಸುಖಕರಕ್ಕೆ ಪೋಷಕ ಇನ್ನೊಂದು ಗ್ರಹವಾದ ಗುರುವು ಮಾತ್ರ ಈ ಜಾತಕಕ್ಕೆ ಬಲಾಢ್ಯನಾಗಿ ಲಗ್ನದಲ್ಲಿರುವುದರಿಂದ ಗುರುವಿಗಾಗಿ ಮೀಸಲಾದ ೩ ಗುಣಗಳಿಗೆ ೩ ಗುಣಗಳು ಲಭಿಸುವವು.

ಪತ್ನೀಸೌಖ್ಯಕ್ಕೆ ಶುಭಯೋಗಗಳಾದ ಲಗ್ನದಲ್ಲಿ ಗುರು–ಚಂದ್ರರಿರುವುದರಿಂದ ೨ ಗುಣಗಳಿಗೆ ೨ ಗುಣಗಳು ಲಭಿಸುವವು. ಹೀಗೆ ಪತ್ನೀಸೌಖ್ಯಕ್ಕೆ ೧೫ ಗುಣಗಳಲ್ಲಿ ೯ ಗುಣಗಳು ಲಭಿಸುವವು.

**೪) ಆರ್ಥಿಕಸ್ಥಿತಿಯ ಬಗೆಗೆ ಪಡೆದ ಗುಣಗಳು :**

ಮೇಲೆ ಬರೆದ ಒಂದನೇ ಜಾತಕಕ್ಕೆ ಆರ್ಥಿಕಸ್ಥಿತಿಯ ಬಗೆಗೆ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಪರಿಶೀಲಿಸುವಾ. ನಾಲ್ಕನೇ ಅಧ್ಯಾಯದ ೩೭ನೇಪುಟದಿಂದ ೫೦ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಆರ್ಥಿಕಪರಿಸ್ಥಿತಿಯ ಬಗೆಗೆ ಗುಣಮಾಪನ ಮಾಡುವಾಗ ಪಿತ್ರಾರ್ಜಿತ ಸೌಖ್ಯಕ್ಕೆ ೩ ಗುಣಗಳು, ಸ್ವಆರ್ಜಿತಸೌಖ್ಯಕ್ಕೆ ೪ ಗುಣಗಳು, ಆಕಸ್ಮಿಕಧನ ಯೋಗಕ್ಕೆ ೩ ಗುಣಗಳು ಹೀಗೆ ಆರ್ಥಿಕ ಸ್ಥಿತಿಯ ಬಗೆಗೆ ೧೦ ಗುಣಗಳನ್ನು ನಿರ್ಧರಿಸಲಾಗಿದ್ದು ಮೇಲಿನ ಜಾತಕಕ್ಕೆ ಎಷ್ಟುಗುಣಗಳು ಲಭಿಸುತ್ತವೆ ಎಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದಲ್ಲಿ ದ್ವಿತಿಯೇಶನು ರಾಶಿಬಲದವನೂ ಸ್ಥಾನ ಬಲದವನೂ ಇದ್ದಾನೆ. ಆದರೆ ಶನಿಯೊಂದಿಗೆ ಪ್ರತಿಯೋಗ ಮಾಡುತ್ತಾನೆ

ಅಲ್ಲದೇ ದ್ವಿತೀಯಂದಲ್ಲಿ ಶುಕ್ರನು ಸ್ಥಾನಬಲದವನಿದ್ದರೂ ರಾಶಿಬಲದವನಿಲ್ಲ ಹೀಗಾಗಿ ½ ಗುಣಗಳು ಬರುತ್ತವೆ. ಚತುರ್ಥದಲ್ಲಿ ಯಾವ ಗ್ರಹವೂ ಇಲ್ಲ ಚತುರ್ಥೇಶ ಸ್ಥಾನಬಲವಿದ್ದರೂ ರಾಶಿಬಲದವನಿಲ್ಲ. ಹೀಗಾಗಿ 1½ ಗುಣಗಳು ಬರುತ್ತವೆ. ದಶಮೇಶನು ಬಲಾಢ್ಯನಾಗಿ ರಾಶಿಬಲದವಸ್ಥಾನಬಲದವನಿಲ್ಲ. ಒಟ್ಟಿನಲ್ಲಿ ಪಿತ್ರಾರ್ಜಿತಕ್ಕಾಗಿ ನಿರ್ಧರಿಸಿದ ೩ ಗುಣಗಳಲ್ಲಿ 1½ ಗುಣಗಳು ಲಭಿಸುತ್ತವೆ.

ಇನ್ನು ಮೇಲಿನ ಜಾತಕಕ್ಕೆ ಸ್ವಅರ್ಜಿತಕ್ಕಾಗಿ ಎಷ್ಟು ಗುಣಗಳು ಬರಬಹುದೆಂದು ನೋಡುವಾ. ಮೇಲಿನ ಜಾತಕವು ಕರ್ಕಲಗ್ನದ್ದು. ಈ ಲಗ್ನಕ್ಕೆ ಮಂಗಳ ಚಂದ್ರ, ಶುಕ್ರರು ಸ್ವಅರ್ಜಿತ ಪೋಷಕ ಗ್ರಹಗಳು. ಇದರಲ್ಲಿ ಮಂಗಳನಿಗೆ ಎರಡು ಗುಣಗಳು ಚಂದ್ರ, ಶುಕ್ರರಿಗೆ ಒಂದೊಂದು ಗುಣ ನಿರ್ಧರಿಸಲಾಗಿದೆ, ಮಂಗಳನು ರಾಶಿಬಲದವನಿದ್ದು, ಸ್ಥಾನಬಲವಿರುವುದಿಲ್ಲ ಆದುದರಿಂದ ೨ ಗುಣಗಳಲ್ಲಿ ೧ ಗುಣ ಲಭಿಸುತ್ತದೆ. ಚಂದ್ರನು ರಾಶಿಬಲದವನೂ ಸ್ಥಾನಬಲದವನೂ ಇರುವುದರಿಂದ ೧ ಗುಣಕ್ಕೆ ೧ಗುಣಲಭಿಸುತ್ತದೆ. ಶುಕ್ರನು ರಾಶಿಬಲ ಇಲ್ಲದೇ ಸ್ಥಾನಬಲ ಮಾತ್ರ ಇದ್ದಾನೆ. ಆದುದರಿಂದ ½ಗುಣಬರುತ್ತದೆ. ಒಟ್ಟಿನಲ್ಲಿ ಸ್ವಅರ್ಜಿತದ ೪ ಗುಣಗಳಲ್ಲಿ 2½ ಗುಣಗಳುಲಭಿಸುತ್ತವೆ.

ಇನ್ನು ಮೇಲಿನ ಜಾತಕಕ್ಕೆ ಆಕಸ್ಮಿಕಧನಯೋಗದ ಸೌಖ್ಯಕ್ಕೆ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ತಿಳಿಯುವಾ. ಆಕಸ್ಮಿಕಧನಯೋಗಕ್ಕೆ ೩ ಗುಣಗಳನ್ನು ನಿರ್ಧರಿಸಲಾಗಿದ್ದು. ಅವುಗಳಲ್ಲಿ ಅಷ್ಟಮಸ್ಥಾನ ಅಷ್ಟಮೇಶನ ಬಲಾಬಲಕ್ಕೆ ೧ ಗುಣ. ಪಂಚಮಸ್ಥಾನ. ಪಂಚಮೇಶನ ಬಲಾಬಲಕ್ಕೆ ೧ ಗುಣ. ಆಕಸ್ಮಿಕಧನಯೋಗದ ಯೋಗಗಳಿಗೆ ೧ ಗುಣ ನಿರ್ಧರಿಸಲಾಗಿದೆ. ಮೇಲಿನ ಜಾತಕದಲ್ಲಿ ಅಷ್ಟಮೇಶನು ಬಲಾಢ್ಯವಾಗಿ ಅಷ್ಟಮದಲ್ಲಿದ್ದಾನೆ. ರಾಶಿಬಲ, ಸ್ಥಾನಬಲವಿದ್ದರೂ ಸೂರ್ಯನು. ಪ್ರತಿಯೋಗ ಮಾಡುತ್ತಾನೆ ಆದುದರಿಂದ ½ ಗುಣಗಳು ಲಭಿಸುವವು. ಪಂಚಮೇಶನು ರಾಶಿಬಲದವನಿದ್ದು ಸ್ಥಾನಬಲವಿಲ್ಲ ಆದುದರಿಂದ ½ ಗುಣ. ಗುರು-ಚಂದ್ರರ ಶುಭಯೋಗವಿರುವುದರಿಂದ ೧ ಗುಣ. ಒಟ್ಟಿನಲ್ಲಿ ೩ ಗುಣಕ್ಕೆ ೨ ಗುಣಗಳು ಲಭಿಸುವವು. ಒಟ್ಟಿನಲ್ಲಿ ಮೇಲಿನ ಜಾತಕದ ಆರ್ಥಿಕಸ್ಥಿತಿಯ ಗುಣಗಳಲ್ಲಿ ಪಿತ್ರಾರ್ಜಿತಕ್ಕೆ

1½ ಗುಣ ಸ್ವಅರ್ಜಿತ 2½ ಗುಣ ಆಕಸ್ಮಿಕಧನಯೋಗದ ೨ ಗುಣಗಳು ಹೀಗೆ ೧೦ ಗುಣಗಳಲ್ಲಿ ೬ ಗುಣಗಳು ಲಭಿಸಿದಂತಾಯಿತು.

### ೫) ಶಿಕ್ಷಣಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಜಾತಕಕ್ಕೆ ಶಿಕ್ಷಣದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಕಂಡುಕೊಳ್ಳುವಾ. ಐದನೇ ಅಧ್ಯಾಯದ ೫೧ನೇ ಪುಟದಿಂದ ೫೮ನೇ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಶಿಕ್ಷಣದ ಬಗೆಗೆ ಗುಣಮಾಪನ ಮಾಡುವಾಗ ಗುರುವಿನ ಬಲಾಬಲ, ಬುಧನಬಲಾಬಲ, ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲ, ತೃತೀಯಸ್ಥಾನ ಹಾಗೂ ತೃತೀಯೇಶನ ಬಲಾಬಲ ಹೀಗೆ ನಾಲ್ಕು ಸಂಗತಿಗಳ ಬಲಾಬಲವನ್ನು ತೂಗಿ ನೋಡಬೇಕು. ಪ್ರತಿಯೊಂದು ಸಂಗತಿಗಳಿಗೆ ಎರಡೆರಡು ಗುಣಗಳಂತೆ ಎಂಟು ಗುಣಗಳನ್ನು ನಿರ್ಧರಿಸಲಾಗಿದ್ದು ಅವುಗಳಲ್ಲಿ ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಬರಬಹುದೆಂಬುದನ್ನು ತಿಳಿಯುವಾ.

ಮೇಲೆ ಬರೆದ ಜಾತಕದಲ್ಲಿ ಗುರು ಉಚ್ಚರಾಶಿಯವನಾಗಿ ಲಗ್ನದಲ್ಲಿ ಚಂದ್ರನೊಂದಿಗೆ ವಿರಾಜನಾಗಿದ್ದಾನೆ. ಆದುದರಿಂದ ೨ ಗುಣಗಳಿಗೆ ೨ಗುಣಗಳು ಲಭಿಸಿದಂತಾಯಿತು. ಇನ್ನು ಬುಧನು ಸಿಂಹರಾಶಿಯವನಾಗಿ ರವಿ, ಶುಕ್ರರೊಂದಿಗೆ ದ್ವಿತೀಯದಲ್ಲಿದ್ದಾನೆ ಅಂದರೆ ಸ್ಥಾನಬಲದವನಿದ್ದರೂ ರಾಶಿ ಬಲದವನಿರುವುದಿಲ್ಲವಾದುದರಿಂದ ೨ ಗುಣಗಳಿಗೆ ೧ ಗುಣ ಬರುತ್ತದೆ. ಪಂಚಮದಲ್ಲಿ ಯಾವ ಗ್ರಹವಿಲ್ಲ. ಪಂಚಮೇಶನು ರಾಶಿಬಲದವನಿದ್ದು ಸ್ಥಾನ ಬಲದವನಿರುವುದಿಲ್ಲ. ಆದುದರಿಂದ ೨ ಗುಣಗಳಲ್ಲಿ ೧ ಗುಣಲಭಿಸುತ್ತದೆ. ಇನ್ನು ತೃತೀಯೇಶನಾದ ಬುಧನು ದ್ವಿತೀಯದಲ್ಲಿದ್ದು ಸ್ಥಾನಬಲದವನಿದ್ದು ರಾಶಿಬಲದವನಿರುವುದಿಲ್ಲವಾದುದರಿಂದ ೨ ಗುಣಗಳಿಗೆ ೧ ಗುಣಲಭಿಸುತ್ತದೆ. ಇನ್ನೊಂದು ಮಹತ್ವದ ಅಂಶವೆಂದರೆ ಬಲಾಢ್ಯ ಗುರುವಿನ ಶುಭದೃಷ್ಟಿಯು ಪಂಚಮಸ್ಥಾನದಲ್ಲಿರುವುದು ಶಿಕ್ಷಣದೃಷ್ಟಿಯಿಂದ ಶುಭವು. ಒಟ್ಟಿನಲ್ಲಿ ಶಿಕ್ಷಣದೃಷ್ಟಿಯಿಂದ ಈ ಜಾತಕಕ್ಕೆ ೮ ಗುಣಗಳಲ್ಲಿ ೫ ಗುಣಗಳು ಲಭಿಸುತ್ತವೆ.

## ೬) ಉದ್ಯೋಗದ ಬಗೆಗೆ ಪಡೆದ ಗುಣಗಳು :

ಮೇಲೆ ಬರೆದ ಜಾತಕಕ್ಕೆ ಉದ್ಯೋಗದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ತಿಳಿದುಕೊಳ್ಳಲು ಆರನೇಯ ಅಧ್ಯಾಯದ ೫೯ನೇ ಪುಟದಿಂದ ೬೬ನೇ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಉದ್ಯೋಗದ ಬಗೆಗೆ ಗುಣಮಾಪನಮಾಡುವಾಗ ದಶಮ ಹಾಗೂ ದಶಮೇಶನ ಬಲಾಬಲ, ಲಗ್ನ ಹಾಗೂ ಲಗ್ನೇಶನ ಬಲಾಬಲ, ದ್ವಿತೀಯ ಹಾಗೂ ದ್ವಿತೀಯೇಶನ ಬಲಾಬಲ, ಪಂಚಮ ಹಾಗೂ ಪಂಚಮೇಶನ ಬಲಾಬಲ, ಚತುರ್ಥ ಹಾಗೂ ಚತುರ್ಥೇಶನ ಬಲಾಬಲ, ತೃತೀಯ ಹಾಗೂ ತೃತಿಯೇಶನ ಬಲಾಬಲ, ಈ ಆರು ಸಂಗತಿಗಳಿಂದ ಗುಣಮಾಪನ ಮಾಡಬೇಕೆಂದು ವಿವರಿಸಲಾಗಿದ್ದು ಅವುಗಳಲ್ಲಿ ದಶಮ ಹಾಗೂ ದಶಮೇಶನ ಬಲಾಬಲಕ್ಕೆ ಮೂರು ಗುಣಗಳನ್ನು ಉಳಿದ ಐದು ಸಂಗತಿಗಳಿಗೆ ಪ್ರತಿಯೊಂದಕ್ಕೆ ಒಂದೊಂದು ಗುಣದಂತೆ ಐದು ಗುಣಗಳು ಒಟ್ಟಿನಲ್ಲಿ ಉದ್ಯೋಗಕ್ಕೆ ಎಂಟಗುಣಗಳು ನಿರ್ಧರಿಸಲಾಗಿದ್ದು. ಈ ಮೇಲೆ ಬರೆದ ಮಾದರೀ ಒಂದನೇ ಜಾತಕಕ್ಕೆ ಉದ್ಯೋಗ ದೃಷ್ಟಿಯಿಂದ ಎಷ್ಟು ಗುಣಗಳು ಬರಬಹುದೆಂಬುದನ್ನು ಅರಿಯುವಾ.

ಮೇಲೆ ಬರೆದ ಜಾತಕದಲ್ಲಿ ದಶಮೇಶನಾದ ಮಂಗಳನು ರಾಶಿಬಲದವನಿದ್ದು ಸ್ಥಾನಬಲದವನಿರುವುದಿಲ್ಲ ವಾದುದರಿಂದ ೩ಗುಣಗಳಲ್ಲಿ 1½ಗುಣಗಳು ಲಭಿಸುತ್ತವೆ. ದ್ವಿತೀಯಸ್ಥಾನಾಧಿಪತಿಯಾದ ಸೂರ್ಯನು ದ್ವಿತೀಯದಲ್ಲಿದ್ದಾನೆ ಅಲ್ಲದೇ ಸ್ಥಾನಬಲವಿದ್ದು ರಾಶಿಬಲವಿಲ್ಲದ ಬುಧ ಶುಕ್ರರು ದ್ವಿತೀಯದಲ್ಲಿದ್ದಾರೆ. ಆದರೆ ಶನಿ–ರವಿಯರ ಪ್ರತಿಯೋಗವಿದೆ. ಇದರಿಂದ ½ ಗುಣಗಳು ಲಭಿಸುತ್ತವೆ. ಇನ್ನು ಪಂಚಮಾಧಿಪತಿಯಾದ ಕುಜನು ರಾಶಿಬಲದವನಿದ್ದು ಸ್ಥಾನಬಲದವನಿರದೇ ಷಷ್ಠದಲ್ಲಿದ್ದಾನೆ.ಅಲ್ಲದೇ ಪಂಚಮದಲ್ಲಿ ಯಾವುದೇ ಗ್ರಹವಿರದಿದ್ದರೂ ಪಂಚಮಸ್ಥಾನದ ಮೇಲೆ ಬಲಾಢ್ಯ ಗುರುವಿನ ಶುಭದೃಷ್ಟಿ ಇದೆ. ಆದುದರಿಂದ ½ಗುಣಗಳು ಲಭಿಸುತ್ತವೆ. ಇನ್ನು ಚತುರ್ಥಾಧಿಪತಿಯಾದ ಶುಕ್ರನು ಸ್ಥಾನಬಲದವನೇನೋ ಇದ್ದಾನೆ. ಆದರೆ ರಾಶಿಬಲವಿರುವುದಿಲ್ಲವಾದುದರಿಂದ ½ ಗುಣಗಳು ದೊರೆಯುತ್ತದೆ. ಇದರಂತೆ ತೃತೀಯಾಧೀಶನಾದ ಬುಧನು ಸ್ಥಾನಬಲದವನಿದ್ದು ರಾಶಿಬಲದವ

ನಿರುವುದಿಲ್ಲ. ಹಾಗೂ ತೃತೀಯದಲ್ಲಿ ಒಂದು ಗ್ರಹವಿರುವುದಿಲ್ಲವಾದುದರಿಂದ $\frac{1}{3}$ ಗುಣಗಳು ಲಭಿಸುತ್ತವೆ. ಕೊನೆಯದಾಗಿ ಲಗ್ನೇಶನಾದ ಚಂದ್ರನು ಸ್ವಗೃಹೀಯನಾಗಿ ಲಗ್ನದಲ್ಲಿದ್ದಾನೆ ಅಲ್ಲದೇ ಉಚ್ಚರಾಶಿಯ ಗುರುವು ಲಗ್ನದಲ್ಲಿದ್ದಾನೆ ಹೀಗಾಗಿ ೧ ಗುಣಕ್ಕೆ ೧ ಗುಣ ಲಭಿಸುತ್ತದೆ. ಒಟ್ಟಿನಲ್ಲಿ ಉದ್ಯೋಗ ದೃಷ್ಟಿಯಿಂದ ಈ ಜಾತಕಕ್ಕೆ ೮ ಗುಣಗಳಲ್ಲಿ $4\frac{1}{2}$ ಗುಣಗಳು ಲಭಿಸುತ್ತವೆ.

## ೭) ಸಂತಾನ (ಸೌಖ್ಯ)ಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ಒಂದನೇ ಜಾತಕವು ಸಂತಾನ ಸೌಖ್ಯದೃಷ್ಟಿಯಿಂದ ಎಷ್ಟು ಗುಣಗಳನ್ನು ಪಡೆದಿದೆ ಎಂಬುದನ್ನು ಅರಿಯಲು ಏಳನೇ ಅಧ್ಯಾಯದ ೭೭ನೇ ಪುಟದಿಂದ ೭೩ನೇ ಪುಟದ ವರೆಗೆ ವಿವರಿಸಿದಂತೆ ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲ ಹಾಗೂ ಗುರುವಿನ ಬಲಾಬಲ ಮತ್ತು ಸಂತತೀ ಸೌಖ್ಯದ ಪೋಷಕ ಯೋಗಗಳು ಈ ಮೂರೇ ಮೂರು ಸಂಗತಿಗಳಿಂದ ಸಂತತಿ ಸೌಖ್ಯದ ಬಗೆಗೆ ತಿಳಿಯುತ್ತದೆ. ಇದರಲ್ಲಿ ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲಕ್ಕೆ ಮೂರು ಗುಣಗಳನ್ನು ಗುರುವಿನ ಬಲಾಬಲಕ್ಕೆ ಮೂರು ಗುಣಗಳನ್ನು ಸಂತತೀಪೋಷಕ ಯೋಗಕ್ಕೆ ಎರಡು ಗುಣಗಳು ಹೀಗೆ ಎಂಟು ಗುಣಗಳನ್ನು ನಿರ್ಧರಿಸಿದ್ದು, ಅವುಗಳಲ್ಲಿ ಮೇಲೆ ಬರೆದ ಜಾತಕಕ್ಕೆ ಎಷ್ಟು ಗುಣಗಳು ದೊರೆಯಬಹುದು ಎಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದಲ್ಲಿ ಪಂಚಮದಲ್ಲಿ ಯಾವುದೇ ಗ್ರಹವಿರದಿದ್ದರೂ ಪಂಚಮೇಶನಾದ ಕುಜನು ರಾಶಿಬಲವನಿದ್ದು ಸ್ಥಾನಬಲದವನಿರುವುದಿಲ್ಲ-ವಾದುದರಿಂದ ೩ ಗುಣಗಳಲ್ಲಿ $1\frac{1}{2}$ ಗುಣಗಳು ಬರುತ್ತವೆ. ಇದರಂತೆ ಸಂತತಿ ಪೋಷಕ ಗ್ರಹವಾದ ಗುರುವು ಬಲಾಢ್ಯನಾಗಿ ಲಗ್ನದಲ್ಲಿ ಚಂದ್ರನೊಂದಿಗೆ ಇರುವುದರಿಂದ ೩ ಗುಣಕ್ಕೆ ೩ ಗುಣಗಳು ಲಭಿಸುವವು. ಇದು ಅಲ್ಲದೇ ಗುರು-ಚಂದ್ರ ಶುಭಯೋಗವು ಲಗ್ನದಲ್ಲಿ ಹಾಗೂ ಗುರುವಿನ ಶುಭದೃಷ್ಟಿ ಪಂಚಮಸ್ಥಾನದ ಮೇಲೆ ಇರುವುದರಿಂದ ೨ ಗುಣಕ್ಕೆ ೨ ಗುಣಗಳು ಲಭಿಸುವವು. ಹೀಗಾಗಿ ಸಂತತೀಸೌಖ್ಯಕ್ಕೆ ಈ ಜಾತಕಕ್ಕೆ ೮ ಗುಣಗಳಲ್ಲಿ $6\frac{1}{3}$ ಗುಣಗಳು ದೊರೆಕಿದಂತಾಯಿತು.

**೮) ಭಾಗ್ಯಕ್ಕೆ ಪಡೆದ ಗುಣಗಳು :**

ಮೇಲೆ ಬರೆದ ಮಾದರೀ ಒಂದನೇ ಜಾತಕವು ಭಾಗ್ಯದೃಷ್ಟಿಯಿಂದ ಎಷ್ಟುಗುಣಗಳನ್ನು ಪಡೆದಿದ್ದಾರೆ ಎಂಬುದನ್ನು ತಿಳಿಯಲು ಎಂಟನೇ ಅಧ್ಯಾಯದ ೭೪ನೇ ಪುಟದಿಂದ ೮೧ನೇ ಪುಟದವರೆಗೆ ವಿವರಿಸಿದಂತೆ ಭಾಗ್ಯೇಶನ ಬಲಾಬಲ ಭಾಗ್ಯಸ್ಥಾನದಲ್ಲಿರುವ ಗ್ರಹ (ಗ್ರಹಗಳ) ರ ಬಲಾಬಲ ಹಾಗೂ ಭಾಗ್ಯ ಪೋಷಕ ಯೋಗಗಳು. ಇದರಲ್ಲಿ ಭಾಗ್ಯೇಶನ ಬಲಾಬಲಕ್ಕೆ ನಾಲ್ಕು ಗುಣಗಳನ್ನು ಭಾಗ್ಯದಲ್ಲಿರುವ ಗ್ರಹಕ್ಕೆ ಎರಡು ಗುಣಗಳನ್ನು ಹಾಗೂ ಭಾಗ್ಯ ಪೋಷಕ ಯೋಗಗಳಿಗೆ ಎರಡು ಗುಣಗಳು ಹೀಗೆ ಎಂಟು ಗುಣಗಳನ್ನು ನಿರ್ಧರಿಸಲಾಗಿದ್ದು, ಅವುಗಳಲ್ಲಿ ಈ ಜಾತಕಕ್ಕೆ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಪರಿಶೀಲಿಸುವಾ.

ಮೇಲೆ ಬರೆದ ಜಾತಕದಲ್ಲಿ ಭಾಗ್ಯೇಶನಾದ ಗುರುವು ಉಚ್ಚರಾಶಿ ಯವನಾಗಿ ಲಗ್ನೇಶನೊಂದಿಗೆ ಲಗ್ನದಲ್ಲಿರುವುದರಿಂದ ೪ ಗುಣಕ್ಕೆ ೪ ಗುಣಗಳು ಲಭಿಸುವವು. ಭಾಗ್ಯದಲ್ಲಿ ಯಾವುದೇ ಗ್ರಹವಿರುವುದಿಲ್ಲವಾದುದರಿಂದ ಎರಡುಗುಣಕ್ಕೆ ಶೂನ್ಯಗುಣ ದೊರೆಯುತ್ತದೆ. ಇನ್ನು ಭಾಗ್ಯಪೋಷಕ ಯೋಗವಾದ ಲಗ್ನೇಶ – ಭಾಗ್ಯೇಶರ ಶುಭಯೋಗವು ಲಗ್ನದಲ್ಲಿರುವುದರಿಂದ ಭಾಗ್ಯವೃದ್ಧಿಯಾಗಿದೆ. ಹೀಗಾಗಿ ೮ ಗುಣಗಳಲ್ಲಿ ೬ ಗುಣಗಳು ಲಭಿಸಿವೆ.

**೯) ಶತ್ರು– ಮಿತ್ರರ, ಸಹೋದರ – ಸಹೋದರಿಯರ ಸೌಖ್ಯದ ವಿಷಯವಾಗಿ ಪಡೆದ ಗುಣಗಳು :**

ಮೇಲೆ ಬರೆದ ಮಾದರೀ ಒಂದನೇ ಜಾತಕದಲ್ಲಿ ಶತ್ರು–ಮಿತ್ರ, ಸಹೋದರ–ಸಹೋದರೀಯರಸೌಖ್ಯದ ದೃಷ್ಟಿಯಿಂದ ಎಷ್ಟು ಗುಣಗಳನ್ನು ಪಡೆದಿದ್ದಾರೆ ಎಂಬುದನ್ನು ತಿಳಿಯಲು ಒಂಬತ್ತನೇ ಅಧ್ಯಾಯದ [illegible]ನೇ ಪುಟದಿಂದ ೯೧ನೇ ಪುಟದವರೆಗೆ ವಿವರಿಸಿದಂತೆ ತೃತೀಯಸ್ಥಾನ ಹಾಗೂ ತೃತೀಯೇಶನ ಬಲಾಬಲ, ಷಷ್ಠಸ್ಥಾನ ಹಾಗೂ ಷಷ್ಠೇಶನ ಬಲಾಬಲ, ಲಾಭಸ್ಥಾನ ಹಾಗೂ ಲಾಭೇಶನ ಬಲಾಬಲ ಅಲ್ಲದೇ ಶತ್ರು– ಮಿತ್ರ, ಸಹೋದರ ಸಹೋದರೀಯರಸೌಖ್ಯದ ಯೋಗಗಳು. ಈ ನಾಲ್ಕು ಸಂಗತಿ

ಗಳಿಂದ ಶತ್ರು-ಮಿತ್ರ ಸಹೋದರ – ಸಹೋದರಿೀಯರಸೌಖ್ಯದ ವಿಷಯ ವಾಗಿ ತಿಳಿಯುತ್ತದೆ. ಇಲ್ಲಿ ಪ್ರತಿಯೊಂದು ಸಂಗತಿಗಳಿಗೆ ಎರಡೆರಡು ಗುಣ ಗಳಂತೆ ಒಟ್ಟು ಎಂಟುಗುಣಗಳನ್ನು ನಿರ್ಧರಿಸಲಾಗಿದ್ದು ಅವುಗಳಲ್ಲಿ ಮೇಲೆ ಬರೆದ ಜಾತಕಕ್ಕೆ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಪರಿಶೀಲಿಸುವಾ.

ಮೇಲೆ ಬರೆದ ಜಾತಕದಲ್ಲಿ ಷಷ್ಠೇಶನಾದ ಗುರುವು ಲಗ್ನದಲ್ಲಿ ಬಲಾಢ್ಯ ನಿದ್ದಾನೆ ಹಾಗೂ ಷಷ್ಠದಲ್ಲಿ ಬಲಾಢ್ಯ ಕುಜನಿದ್ದಾನೆ. ಆದುದರಿಂದ ೨ ಗುಣ ಗಳಿಗೆ ೨ ಗುಣಗಳು ಲಭಿಸುವವು. ಅಲ್ಲದೇ ಷಷ್ಠದಲ್ಲಿ ಉಚ್ಚರಾಶಿಯ ಕೇತುವಿನೊಂದಿಗೆ ಕುಜನನಿರುವ (ಪುಟ ೯೦ರಲ್ಲಿ ವಿವರಿಸಿದಂತೆ) ದು ಶುಭ ಯೋಗವು ಅದಕ್ಕಾಗಿ ಮೀಸಲಾದ ೨ ಗುಣಗಳಲ್ಲಿ 1½ ಗುಣಲಭಿಸುತ್ತದೆ.

ಇನ್ನು ಲಾಭೇಶನಾದ ಶುಕ್ರನು ಸ್ಥಾನಬಲದವನಿದ್ದರೂ ರಾಶಿಬಲದವ ನಿರುವದಿಲ್ಲ ಅಲ್ಲದೇ ಲಾಭದಲ್ಲಿ ಯಾವುದೇ ಗ್ರಹ ವಿರುವುದಿಲ್ಲ ಆದುದರಿಂದ ೨ ಗುಣಗಳಲ್ಲಿ ೧ ಗುಣ ಮಾತ್ರ ಲಭಿಸುತ್ತದೆ. ಇದರಂತೆ ಇನ್ನು ತೃತೀಯಾಧಿ ಪತಿಯಾದ ಬುಧನೂ ಕೂಡ ರಾಶಿಬಲವಿಲ್ಲದೆ ಸ್ಥಾನಬಲದವನಾಗಿದ್ದಾನೆ. ಅಲ್ಲದೇ ತೃತೀಯದಲ್ಲಿ ಯಾವುದೇ ಗ್ರಹ ವಿರುವುದಿಲ್ಲ. ಆದುದರಿಂದ ೨ ಗುಣಗಳಲ್ಲಿ ೧ ಗುಣ ಮಾತ್ರಲಭಿಸುತ್ತದೆ. ಒಟ್ಟಿನಲ್ಲಿ ಶತ್ರು – ಮಿತ್ರ, ಸಹೋದರ – ಸಹೋದರಿಯರ ಸೌಖ್ಯದ ವಿಷಯಕ್ಕಾಗಿ ಮೀಸಲಾದ ೮ಗುಣಗಳಲ್ಲಿ 4½ಗುಣಗಳು ದೊರಕಿವೆ. ಅದರಲ್ಲಿಯೂ ಶತ್ರು ದಮನಕ್ಕಾಗಿ 2½ ಗುಣಗಳು ಮಿತ್ರಸೌಖ್ಯಕ್ಕಾಗಿ ೧ ಗುಣ. ಸಹೋದರ ಸಹೋದರಿಯರ ಸೌಖ್ಯಕ್ಕೆ ೧ ಗುಣ ಒಟ್ಟಿನಲ್ಲಿ 4½ ಗುಣ.

## ೧೦) ಶುಭ_ಅಶುಭಯೋಗಗಳಿಗಾಗಿ ಪಡೆದ ಗುಣಗಳು :

ಮೇಲೆ ಬರೆದ ಜಾತಕದಲ್ಲಿ ಗುರು-ಚಂದ್ರರ ಗ್ರಹಯೋಗ, ಹಾಗೂ ಗಜಕೇಸರಿಯೋಗಗಳಂಥ ಶುಭಯೋಗಗಳಿವೆ. ಅದಕ್ಕಾಗಿ ಮೀಸಲಾದ ೫ ಗುಣಗಳು ದೊರೆಯುಬಹುದಾಗಿತ್ತು. ಆದರೆ ಜಾತಕದ ದ್ವಿತೀಯ, ಅಷ್ಟಮದಲ್ಲಿ ಪಾಪಗ್ರಹಗಳಾದ ರವಿ-ಶನಿಯರ ಪ್ರತಿಯೋಗವಿರುತ್ತದೆ. ಇದು ಅಶುಭಯೋಗ. ಅದಕ್ಕಾಗಿ ೫ ಗುಣಗಳನ್ನು ಕಳೆಯಬೇಕಾಗುತ್ತದೆ.

ಹೀಗಾಗಿ ಶುಭಾ ಶುಭಯೋಗಗಳಿಗಾಗಿ ಮೀಸಲಾದ ೧೦ ಗುಣಗಳಲ್ಲಿ ಶೂನ್ಯ ಗುಣ ದೊರೆಯುತ್ತದೆ.

## ೧೧) ಕುಂಡಲಿ ವರ್ಗೀಕರಣದಲ್ಲಿ ಯಾವ ವರ್ಗದ್ದು ?

ಹನ್ನೊಂದನೇ ಅಧ್ಯಾಯದ ೧೦೨ ಪುಟದಲ್ಲಿ ವಿವರಿಸಿದಂತೆ ಮೇಲಿನ ಜಾತಕವು ಯಾವ ವರ್ಗದಲ್ಲಿ ಬರುತ್ತದೆ ಎಂಬುದನ್ನು ಪರಿಶೀಲಿಸುವಾ.

೧) ಆರೋಗ್ಯ ಹಾಗೂ ಆಯುವರ್ಧನ ಮೀಸಲಾದ ಗುಣ ೧೦ ಪಡೆದ ಗುಣ ೮

೨) ಮಾತೃ ಸೌಖ್ಯಕ್ಕೆ ಮೀಸಲಾದ ಗುಣ ೧೫ ಪಡೆದ ಗುಣ $10\frac{1}{2}$

೩) ಪತಿ ಹಾಗೂ ಪತ್ನೀಸೌಖ್ಯಕ್ಕೆ ಮೀಸಲಾದ ಗುಣ ೧೫ ಪಡೆದ ಗುಣ ೯

೪) ಆರ್ಥಿಕ ಸ್ಥಿತಿಯ ಬಗೆಗೆ ಮೀಸಲಾದ ಗುಣ ೧೦ ಪಡೆದ ಗುಣ ೬

5) ಶಿಕ್ಷಣಕ್ಕೆ ಮೀಸಲಾದ ಗುಣಗಳು ೮ ಪಡೆದ ಗುಣ ೫

೬) ಉದ್ಯೋಗಕ್ಕೆ ಮೀಸಲಾದ ಗುಣಗಳು ೮ ಪಡೆದ ಗುಣ $4\frac{1}{2}$

೭) ಸಂತಾನ (ಸಂತತೀಸೌಖ್ಯ) ಮೀಸಲಾದ ಗುಣ ೮ ಪಡೆದ ಗುಣ $6\frac{1}{2}$

೮) ಭಾಗ್ಯಕ್ಕೆ ಮೀಸಲಾದ ಗುಣಗಳು ೮ ಪಡೆದ ಗುಣ ೬

೯) ಶತ್ರು- ಮಿತ್ರ, ಸಹೋದರ – ಸಹೋದರೀಯರ ಸೌಖ್ಯಕ್ಕಾಗಿ ಮೀಸಲಾದ ಗುಣಗಳು ೮ ಪಡೆದ ಗುಣ $4\frac{1}{2}$

೧೦) ಶುಭ- ಅಶುಭಯೋಗಗಳಿಗೆ ಮೀಸಲಾದ ಗುಣಗಳು ೧೦ ಪಡೆದ ಗುಣ ಶೂನ್ಯ

ಒಟ್ಟು ಗುಣಗಳು ೧೦೦. ಪಡೆದಗುಣಗಳು ೬೦. ೧೦೦ಕ್ಕೆ ೬೦ ಗುಣಗಳು ಈ ಜಾತಕಕ್ಕೆ ಲಭಿಸಿವೆ ಆದುದರಿಂದ ಈ ಜಾತಕವು ಎ ಗ್ರೇಡದ್ದು ಇರುತ್ತದೆ.

## ಮಾದರಿ ೨

೧೮೨೮ ಶಾಲಿವಾಹನ ಶಕೆ ಫಾಲ್ಗುಣ ಶುದ್ಧ ಅಷ್ಟಮಿ ಬುಧವಾರ ದಿನಾಂಕ ೨೦-೨-೧೯೦೭ನೇ ಇಸ್ವಿ ರಾತ್ರಿ ೭-೧೫ರಿಂದ ೮ಗಂಟೆಗೆ ಸಿಂಹಲಗ್ನ ವೃಷಭರಾಶಿ ರೋಹಿಣಿ ನಕ್ಷತ್ರದಲ್ಲಿ ಜನಿಸಿದ ಈ ಜಾತಕವನ್ನು ನೋಡಿರಿ.

ಲಗ್ನಕುಂಡಲಿ




ಇನ್ನು ಈ ಜಾತಕದ ಮೇಲುನೋಟಕ್ಕೆ ನಿಮಗೆ ಕಾಣುವ ಅಂಶಗಳೇನು ಎಂಬುದನ್ನು ತುಸು ಯೋಚಿಸಿರಿ. ಸಿಂಹಲಗ್ನಕ್ಕೆ ಯೋಗಕಾರಕ ಗ್ರಹವಾದ ಮಂಗಳನು ಸ್ವಕ್ಷೇತ್ರಿಯಾಗಿ ಕೇಂದ್ರದ ಚತುರ್ಥದಲ್ಲಿದ್ದಾನೆ. ಈ ಅಂಶ ಶುಭವೇನೋ ನಿಜ ಆದರೆ ಮಂಗಳನು ಶನಿಯೊಂದಿಗೆ ಅನ್ಯೋನ್ಯ ದೃಷ್ಟಿತನಿದ್ದಾನೆ. ಅದೂ ಕೂಡ ಅಂಶಾತ್ಮಕವಾಗಿ. ಇದಲ್ಲದೇ ಸಪ್ತಮಸ್ಥಾನ ದೂಷಿತವಿದೆ. ಅಂದರೆ ಸಪ್ತಮದಲ್ಲಿ ರವಿ-ಶನಿಯರ ಯೋಗ, ಶನಿ-ಮಂಗಳರ ಕೇಂದ್ರಯೋಗವು ಚತುರ್ಥ, ಸಪ್ತಮ ಸ್ಥಾನಗಳಲ್ಲಿ ಆದುದರಿಂದ ಈ ಜಾತಕದ ಸಪ್ತಮ ಭಾವದ ಬಗೆಗೆ ನಿಮಗೇನು ಅನಿಸುತ್ತದೆ. ಇವರ ವಿವಾಹ ತಡವಾಗಿ ಜರಗುತ್ತದೆ. ವೈವಾಹಿಕ ಜೀವನ ಸುಖಕರವಿರುವುದಿಲ್ಲ. ಇಲ್ಲವೆ ಇವರು ಸನ್ಯಾಸಿಗಳು ಮಠಾಧೀಶರೂ, ಸಿದ್ಧಿಗಳು, ಸಾಧಕರು, ತಪಸ್ವಿಗಳು,

ಅವಧೂತರು, ಬ್ರಹ್ಮಚಾರಿಗಳು, ಅಧ್ಯಾತ್ಮದ ಒಲವುಳ್ಳವರು, ಧಾರ್ಮಿಕರು ಇರಬಹುದೆಂದು ನೀವು ಯೋಚಿಸಿರುತ್ತಿರಬಹುದು.

ಇವರ ಜಾತಕದ ಬುಧ ಗುರುಗಳ ತ್ರಿಕೋಣಯೋಗವು ವಾಯು ರಾಶಿಯಲ್ಲಿ ಅಲ್ಲದೇ ಚಂದ್ರನು ಉಚ್ಚನಿದ್ದಾನೆ.ಆದುದರಿಂದ ಇವರು ಸಾಹಿತಿಗಳು ಲೇಖಕರು ಕವಿಗಳು ಇರಬಹುದೆಂದು ನೀವು ಯೋಚಿಸುತ್ತಿರಬಹುದು. ನಿಮ್ಮ ಯೋಚನೆ ಊಹೆ, ತರ್ಕ ಸಮಂಜಸವಿದೆ. ಈ ಜಾತಕಯಾರದು ಗೊತ್ತೇ ? ಇವರು ಹೆಸರಾಂತ ಸಾಹಿತಿಗಳೂ ಕವಿಗಳು ಕನ್ನಡಿಗರೂ ಆದ ದಿವಂಗತರಾದ ಪಾರಾವ ಹೇಜೀಬ ಇವರದು. ನೀವು ಯೋಚಿಸಿರುವಂತೆ ಇವರ ಸಪ್ತಮಸ್ಥಾನ ದೂಷಿತವಿದೆ. ಅಂತೆಯೇ ಇವರು ತಮ್ಮ ಹುಟ್ಟೂರಾದ ಹಾವೇರಿ ತಾಲೂಕಿನ ಅಗಡೀಗ್ರಾಮವನ್ನು ಬಿಟ್ಟು ದೂರದ ರಾಯಚೂರು ಸಮೀಪದ ಕುರಗಡ್ಡಿ ಶ್ರೀದತ್ತಾತ್ರೇಯ ಕ್ಷೇತ್ರದಲ್ಲಿ ನೆಲಸಿ೨೫–೩೦ವರುಷಗಳ ಅಖಂಡ ಶ್ರೀದತ್ತಾತ್ರೇಯ ಕುರಿತು ತಪಸ್ಸುಮಾಡಿ ಸಿದ್ಧಿಯನ್ನು ಪಡೆದಿದ್ದರು. ಅವರ ಚತುರ್ಥಸ್ಥಾನದಲ್ಲಿಯ ಕುಜನಿಂದಾಗಿ ಧೃಡನಿಶ್ಚಯ ಮನೋನಿಗ್ರಹ ಏಕಾಗ್ರಚಿತ್ತದಿಂದ ಕಠಿಣ ತಪಸ್ಸುಮಾಡಲು ಶಕ್ಯವಾಯಿತು. ಮಿಥುನ, ಕುಂಭರಾಶಿಗಳಲ್ಲಿಯ ತ್ರಿಕೋಣ ಯೋಗದಿಂದಾಗಿ ಇವರು ಲೇಖಕರು ಆದರು. ಶನಿ–ಮಂಗಳರ, ಅಂಶಾತ್ಮಕ ಕೇಂದ್ರಯೋಗ, ಚತುರ್ಥ ಸಪ್ತಮ ಸ್ಥಾನದಲ್ಲಿಯೂ ರವಿ–ಶನಿಯರ ಗ್ರಹಯೋಗ ಸಪ್ತಮಸ್ಥಾನದಲ್ಲಿಯೂ ಇರುವುದರಿಂದ ಇವರು ಗೃಹಸ್ಥಾಶ್ರಮವನ್ನು ತ್ಯಜಿಸಿ ಸಿದ್ಧಸಾಧಕರನ್ನಾಗಿ ಮಾಡಿತು. ಲಾಭದಲ್ಲಿ ಗುರುವಿರುವುದರಿಂದಲೇ ಇವರಿಗೆ ಸಮಾಜದಲ್ಲಿ ಗೌರವಸ್ಥಾನಮಾನ ಸಿಕ್ಕಿತಲ್ಲದೇ ಅನೇಕ ಹಿಂಬಾಲಕರನ್ನು ಭಕ್ತರನ್ನು ಅನುಯಾಯಿಗಳನ್ನು ಪಡೆಯಲು ಕಾರಣವಾಯಿತು.ಇನ್ನು ಇವರ ಜಾತಕದ ಮೌಲ್ಯಮಾಪನ ಹೇಗೆ ಮಾಡಬೇಕೆಂಬುದನ್ನು ಪರಿಶೀಲಿಸುವಾ.

## ೧) ಆರೋಗ್ಯ ಹಾಗೂ ಆಯುರ್ಮಾನಕ್ಕೆ ಪಡೆದ ಗುಣಗಳು :

ಆರೋಗ್ಯ ಹಾಗೂ ಆಯುರ್ಮಾನದ ದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ನೋಡುವಾ. ಈ ಗ್ರಂಥದ ಒಂದನೇ ಅಧ್ಯಾಯದ

೭ನೇ ಪುಟದಿಂದ ೧೭ನೇ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಆರೋಗ್ಯದ ಬಗೆಗೆ ಗುಣಮಾಪನ ಮಾಡುವಾಗ ಲಗ್ನ ಹಾಗೂ ಲಗ್ನೇಶನ ಬಲಾಬಲಕ್ಕೆ ೨ ಗುಣಗಳು ಷಷ್ಠಸ್ಥಾನ ಹಾಗೂ ಷಷ್ಠೇಶನ ಬಲಾಬಲಕ್ಕೆ ೨ಗುಣಗಳು ಅಷ್ಟಮಸ್ಥಾನ ಹಾಗೂ ಅಷ್ಟಮೇಶನ ಬಲಾಬಲಕ್ಕೆ ೨ಗುಣಗಳು ಸೂರ್ಯನ ಬಲಾಬಲಕ್ಕೆ ೨ ಗುಣಗಳು ಚಂದ್ರನ ಬಲಾಬಲಕ್ಕೆ ೨ ಗುಣಗಳು ಹೀಗೆ ೧೦ ಗುಣಗಳನ್ನು ನಿರ್ಧರಿಸಲಾಗಿದ್ದು, ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಲಭಿಸುತ್ತವೆ ಎಂಬುದನ್ನು ತಿಳಿಯುವಾ.

ಮೇಲೆ ಬರೆದ ಜಾತಕದ ಲಗ್ನದಲ್ಲಿ ಅಂದರೆ ತನುಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಆದರೆ ಲಗ್ನೇಶನು ಶತ್ರುಕ್ಷೇತ್ರಿ ಹಾಗೂ ಶತ್ರುವಿನೊಂದಿಗೆ ಇರುವುದರಿಂದ ಶೂನ್ಯ ಗುಣ ದೊರೆಯುತ್ತದೆ.

ಇನ್ನು ಷಷ್ಠಸ್ಥಾನದಲ್ಲಿ ಮಿತ್ರ ಕ್ಷೇತ್ರಿ ಕೇತು ಇರುವುದರಿಂದ ೧ಗುಣಕ್ಕೆ ೧ಗುಣ ಲಭಿಸುತ್ತದೆ. ಆದರೆ ಷಷ್ಠೇಶನು ರಾಶಿಬಲದವನೂ ಸ್ಥಾನಬಲದವನೂ ಇದ್ದಾನೆ. ಆದರೆ ಶತ್ರುವಿನೊಂದಿಗೆ ಇರುವುದರಿಂದ ½ ಗುಣಗಳು ಲಭಿಸಿದಂತಾಯಿತು.

ಇನ್ನು ಅಷ್ಟಮಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಆದರೆ ಅಷ್ಟಮೇಶನಾದ ಗುರುವು ರಾಶಿಬಲದವನಿರದೇ ಸ್ಥಾನಬಲದವನಿದ್ದಾನೆ. ಆದರೆ ಲಾಭದಲ್ಲಿ ಯಾವುದೇ ಗ್ರಹವಿದ್ದರೂ ಶುಭಫಲಕೊಡುತ್ತದೆ. ಆದುದರಿಂದ ೨ ಗುಣಕ್ಕೆ ೨ ಗುಣಗಳು ಲಭಿಸುತ್ತವೆ.

ಇನ್ನು ಸೂರ್ಯನು ಶತ್ರುಕ್ಷೇತ್ರಿ ಹಾಗೂ ಶತ್ರುವಿನೊಂದಿಗೆ ಇರುವುದರಿಂದ ಸೂರ್ಯನಿಗಾಗಿ ನಿರ್ಧರಿಸಿದ ೨ಗುಣಗಳಲ್ಲಿ ಶೂನ್ಯ ಗುಣಲಭಿಸುತ್ತದೆ.

ಇನ್ನು ಚಂದ್ರನು ರಾಶಿಬಲದವನೂ ಸ್ಥಾನಬಲದವನೂ ಇರುವುದರಿಂದ ಚಂದ್ರನಿಗಾಗಿ ನಿರ್ಧರಿಸಿದ ೨ ಗುಣಗಳಲ್ಲಿ ೨ ಗುಣಗಳು ಲಭಿಸುತ್ತವೆ. ಹೀಗೆ ಆರೋಗ್ಯದೃಷ್ಟಿಯಿಂದ ಈ ಜಾತಕಕ್ಕೆ ೧೦ ಗುಣಗಳಲ್ಲಿ 5½ ಗುಣಗಳು ಲಭಿಸಿದಂತಾಯಿತು.

ಇನ್ನು ಲಗ್ನ,ಲಗ್ನೇಶ ಷಷ್ಠ ಷಷ್ಠೇಶ, ಅಷ್ಟಮ ಅಷ್ಟಮೇಶ, ಸೂರ್ಯ ಚಂದ್ರ, ಈ ಎಂಟು ಸಂಗತಿಗಳಲ್ಲಿ ಲಗ್ನ ಹಾಗೂ ಲಗ್ನೇಶನ ಹೊರತಾಗಿ ಉಳಿದ ಆರು ಸಂಗತಿಗಳು ಪೂರಕವಿರುತ್ತವೆ. ಅದರಲ್ಲಿಯೂ ಅಷ್ಟಮಸ್ಥಾನ ಹಾಗೂ ಅಷ್ಟಮೇಶರು ಬಲಾಢ್ಯರಿರುವುದರಿಂದ ದೀರ್ಘಾಯು ಜಾತಕ ವಿರುತ್ತದೆ.

## ೨) ಮಾತೃಸೌಖ್ಯಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೨ನೇ ಜಾತಕಕ್ಕೆ ಮಾತೃಸೌಖ್ಯದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ತಿಳಿದುಕೊಳ್ಳಲು ಈಗ್ರಂಥದ ಎರಡನೇ ಅಧ್ಯಾಯದ ೧೮ನೇ ಪುಟದಿಂದ ೨೪ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಮಾತೃಸೌಖ್ಯದ ವಿಷಯವಾಗಿ ಚತುರ್ಥ ಸ್ಥಾನದಲ್ಲಿಯ ಗ್ರಹಗಳ ಬಲಾಬಲಕ್ಕೆ ಹಾಗೂ ಚತುರ್ಥೇಶನ ಬಲಾಬಲಕ್ಕೆ ೪ ಗುಣಗಳನ್ನು ಬಲಾಢ್ಯ ಚಂದ್ರನಿಗೆ ೪ಗುಣಗಳು ಬಲಾಢ್ಯ ಶುಕ್ರನಿಗೆ ೩ ಗುಣಗಳು ಬಲಾಢ್ಯ ಗುರುವಿಗೆ ೨ ಗುಣಗಳು ಹಾಗೂ ಹಾಗೂ ಮಾತೃಸೌಖ್ಯದ ಪೋಷಕಯೋಗ ಗಳಿಗೆ ೨ ಗುಣಗಳು ಹೇಗೆ ಮಾತೃಸೌಖ್ಯಕ್ಕೆ ೧೫ ಗುಣಗಳನ್ನು ನಿರ್ಧರಿಸಿದ್ದು ಇವುಗಳಲ್ಲಿ ಈ ಜಾತಕಕ್ಕೆ ಎಷ್ಟು ಗುಣಗಳು ಲಭಿಸಬಹುದೆಂಬುವನ್ನು ಕಂಡು ಕೊಳ್ಳುವಾ.

ಮೇಲಿನ ಜಾತಕದ ಚತುರ್ಥಸ್ಥಾನದಲ್ಲಿ ಮಂಗಳನಿದ್ದಾನೆ ಮಾತೃ ಸೌಖ್ಯಕ್ಕೆ ಮಂಗಳನು ಚತುರ್ಥದಲ್ಲಿರುವುದು ಮಾರಕವು ಆದರೆ ಆ ಮಂಗಳ ನು ಚತುರ್ಥಾಧಿಪತಿಯಾಗಿ ಚತುರ್ಥದಲ್ಲಿದ್ದಾನೆ.ಆದುದರಿಂದ ಸ್ಥಾನಬಲದವ ಮೂಲಕ ಶುಭನು ಆದರೆ ಶನಿ ದೃಷ್ಟಿತನಿರುವದರಿಂದ ಸಂಪೂರ್ಣ ಬಲಾಢ್ಯ ನಿರುವುದಿಲ್ಲ ಆದುದರಿಂದ ೪ ಗುಣಗಳಲ್ಲಿ ೨ ಗುಣಗಳು ಲಭಿಸುತ್ತವೆ.

ಇನ್ನು ಮಾತೃಸೌಖ್ಯದ ಪೋಷಕ ಗ್ರಹವಾದ ಚಂದ್ರನುಉಚ್ಚರಾಶಿ ಯವನಾಗಿ ದಶಮದಲ್ಲಿದ್ದಾನೆ. ಅಂದರೆ ರಾಶಿಬಲದವನೂ ಸ್ಥಾನಬಲ ದವನೂ ಇರುವುದರಿಂದ ೪ ಗುಣಕ್ಕೆ ೪ ಗುಣಗಳು ಲಭಿಸುತ್ತವೆ.

ಇನ್ನು ಮಾತೃಸೌಖ್ಯಕ್ಕೆ ಪೋಷಕ ಇನ್ನೊಂದು ಗ್ರಹವಾದ ಶುಕ್ರನು ಶತ್ರುಕ್ಷೇತ್ರಿಯಾಗಿ ಪಂಚಮದಲ್ಲಿದ್ದಾನೆ ಅಂದರೆ ಸ್ಥಾನಬಲದವನಿದ್ದು ರಾಶಿ ಬಲದವನಿರುವುದಿಲ್ಲ. ಆದುದರಿಂದ ೩ ಗುಣಕ್ಕೆ 1½ ಗುಣಗಳು ಲಭಿಸುತ್ತವೆ. ಇದರಂತೆ ಮಾತೃಸೌಖ್ಯದ ಪೋಷಕ ಮತ್ತೊಂದು ಗ್ರಹವಾದ ಗುರುವು ಕೂಡ ಸ್ಥಾನಬಲದವನಿದ್ದು ರಾಶಿಬಲದವನಿರುವುದಿಲ್ಲವಾದುದರಿಂದ ೨ಗುಣಕ್ಕೆ ೧ ಗುಣ ಲಭಿಸುತ್ತದೆ.

ಶನಿ–ಮಂಗಳರ ಅನ್ಯೋನ್ಯದೃಷ್ಟಿಯೋಗ ಚತುರ್ಥ ಸಪ್ತಮದಲ್ಲಿರುವುದು ಮಾತೃಸೌಖ್ಯಕ್ಕೆ ಮಾರಕಯೋಗ ವಾದಂತಾಯಿತು. ಆದುದರಿಂದ ೨ಗುಣಕ್ಕೆ ಶೂನ್ಯಗುಣ ಲಭಿಸಿದಂತಾಯಿತು. ಹೀಗೆ ಮಾತೃಸೌಖ್ಯದ ೧೫ ಗುಣಗಳಲ್ಲಿ ಈ ಜಾತಕಕ್ಕೆ 8½ ಗುಣಗಳು ಲಭಿಸಿದಂತಾಗಿದೆ.

### ೩) ಪತಿ ಹಾಗೂ ಪತ್ನೀಸೌಖ್ಯಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೨ನೇ ಜಾತಕಕ್ಕೆ ಪತ್ನೀಸೌಖ್ಯದ ದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಪರಿಶೀಲಿಸುವಾ. ಈ ಗ್ರಂಥದ ಮೂರನೇ ಅಧ್ಯಾಯದ ೨೫ನೇ ಪುಟದಿಂದ ೩೧ನೇ ಪುಟದ ವರೆಗೆ ವಿವರಿಸಿದಂತೆ ಪತ್ನೀಸೌಖ್ಯಕ್ಕೆ ೧೫ ಗುಣಗಳಿದ್ದು ಅವುಗಳಲ್ಲಿ ಸಪ್ತಮಸ್ಥಾನ ದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಸಪ್ತಮೇಶನ ಬಲಾಬಲಕ್ಕೆ ೬ಗುಣ ಗಳನ್ನು ಶುಕ್ರನ ಬಲಾಬಲಕ್ಕೆ ೪ ಗುಣಗಳನ್ನು, ಗುರುವಿನ ಬಲಾಬಲಕ್ಕೆ ೩ಗುಣಗಳನ್ನು ಪತ್ನೀಸೌಖ್ಯದ ಶುಭಯೋಗಗಳಿಗೆ ೨ಗುಣಗಳನ್ನು ನಿರ್ಧರಿಸ ಲಾಗಿದ್ದು ಅವುಗಳಲ್ಲಿ ಮೇಲಿನ ಜಾತಕಕ್ಕೆ ಎಷ್ಟುಗುಣಗಳು ಬರಬಹುದೆಂಬು ದನ್ನು ನೋಡುವಾ.

ಇನ್ನು ಮೇಲೆ ಬರೆದ ಮಾದರಿ ೨ನೇ ಜಾತಕದ ಸಪ್ತಮದಲ್ಲಿ ರವಿ–ಶನಿಯರ ಗ್ರಹಯೋಗ ಇದು ಅಸಂಭಯೋಗದಿಂದಾಗಿ ೩ ಗುಣಕ್ಕೆ ಶೂನ್ಯ ಗುಣಗಳು ಲಭಿಸುವವು. ಇನ್ನು ಸಪ್ತಮೇಶನಾದ ಶನಿಯು ರಾಶಿ ಬಲದವನೂ, ಸ್ಥಾನಬಲದವನೂ ಇದ್ದು ಸಪ್ತಮಸ್ಥಾನದಲ್ಲಿರುವವನೇನೋ ನಿಜ. ಆದರೆ ಅವನು ಶತ್ರುವಿನೊಂದಿಗೆ ಇರುವುದರಿಂದ ಅಸ್ತನಿರುವುದರಿಂದ ೩ ಗುಣಗಳಲ್ಲಿ ಶೂನ್ಯ ಗುಣಗಳು ಲಭಿಸುತ್ತವೆ.

ಇನ್ನು ಪತ್ನೀಸೌಖ್ಯದ ನೈಸರ್ಗಿಕ ಪೋಷಕ ಗ್ರಹವಾದ ಶುಕ್ರನು ಸ್ಥಾನ ಬಲದವನೇನೋ ಇದ್ದಾನೆ. ಆದರೆ ಶತ್ರುಕ್ಷೇತ್ರ ಹಾಗೂ ಅಗ್ನಿರಾಶಿಯವ ನಾಗಿರುವುದರಿಂದ ರಾಶಿಬಲದವನಿರುವುದಿಲ್ಲ. ಹೀಗಾಗಿ ೪ ಗುಣಕ್ಕೆ ೨ ಗುಣ ಗಳು ಮಾತ್ರ ಬರುತ್ತವೆ.

ಇನ್ನು ಪತ್ನಿಸೌಖ್ಯದ ಪೋಷಕ ಮತ್ತೊಂದು ಗ್ರಹವಾದ ಗುರುವು ಕೂಡ ಸ್ಥಾನಬಲದವಇದ್ದಾನೆ. ಆದರೆ ರಾಶಿಬಲದವನಿರುವುದಿಲ್ಲ ಶತ್ರುಕ್ಷೇತ್ರ ಹೀಗಾಗಿ ಗುರುವಿಗಾಗಿ ಮೀಸಲಾದ ೩ ಗುಣಗಳಲ್ಲಿ 1½ ಗುಣಗಳು ಬರುತ್ತದೆ.

ಇನ್ನು ಪತ್ನೀಸೌಖ್ಯದ ಶುಭಯೋಗಗಳಂತೂ ಇರುವುದೇ ಇಲ್ಲ ಇವರ ವಿರುದ್ಧ ಪತ್ನೀಸೌಖ್ಯದ ಅಶುಭಯೋಗಗಳಾದ ಶನಿ–ಮಂಗಳರ ಅನ್ಯೋನ್ಯದೃಷ್ಟಿಯೋಗ ಅಂಶಾತ್ಮಕವಾಗಿ ಚತುರ್ಥ–ಸಪ್ತಮದಲ್ಲಿರುವುದು. ರವಿ–ಶನಿಯರ ಗ್ರಹಯೋಗ ಸಪ್ತಮದಲ್ಲಿ ಸಪ್ತಮೇಶ ಅಸ್ತ. ಈ ಎಲ್ಲ ಅಶುಭಯೋಗಗಳಿಂದಾಗಿ ಶುಭಯೋಗಗಳಿಗಾಗಿ ಮೀಸಲಾದ ೨ ಗುಣಗಳಲ್ಲಿ ಶೂನ್ಯಗುಣಗಳು ಲಭಿಸುತ್ತವೆ. ಒಟ್ಟಿನಲ್ಲಿ ಪತ್ನೀಸೌಖ್ಯಕ್ಕೆ ಮೀಸಲಾದ ೧೫ ಗುಣಗಳಲ್ಲಿ ಕೇವಲ 3½ ಗುಣಗಳು ಲಭಿಸುತ್ತವೆ. ಅಂತೆಯೇ ಇವರನ್ನು ಬ್ರಹ್ಮಚಾರಿಯನ್ನಾಗಿ ಹಾಗೂ ಕುರಗಡ್ಡಿ ದತ್ತಕ್ಷೇತ್ರದಲ್ಲಿ ಧ್ಯಾನ, ತಪಸ್ಸು ಕೈಕೊಳ್ಳಲು ಅನುಕೂಲವಾಯಿತು.

**೪) ಆರ್ಥಿಕಸ್ಥಿತಿಯ ಬಗೆಗೆ ಪಡೆದ ಗುಣಗಳು :**

ಮೇಲೆ ಬರೆದ ಜಾತಕಕ್ಕೆ ಆರ್ಥಿಕ ದೃಷ್ಟಿಯಿಂದ ಎಷ್ಟು ಗುಣಗಳು ಬೀಳಬಹುದೆಂಬುದನ್ನು ಪರಿಶೀಲಿಸುವಾ. ಈ ಗ್ರಂಥದ ನಾಲ್ಕನೇ ಅಧ್ಯಾಯದ ೩೨ನೆ. ಪುಟದಿಂದ ೫೦ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬನ ಆರ್ಥಿಕ ಸ್ಥಿತಿಯ ಬಗೆಗೆ ಗುಣಮಾಪನ ಮಾಡುವಾಗ ಪಿತ್ರಾರ್ಜಿತ ಸೌಖ್ಯಕ್ಕೆ ೩ ಗುಣ ಗಳು, ಸ್ವಆರ್ಜಿತಕ್ಕಾಗಿ ೪ ಗುಣಗಳು, ಆಕಸ್ಮಿಕಧನಯೋಗ ೩ ಗುಣಗಳು ಹೀಗೆ ೧೦ ಗುಣಗಳಿದ್ದು. ಈ ಮೇಲಿನ ಜಾತಕಕ್ಕೆ ಎಷ್ಟುಗುಣಗಳು ಲಭಿಸ ಬಹುದೆಂಬುದನ್ನು ತಿಳಿದುಕೊಳ್ಳುವಾ.

ಮೇಲೆ ಬರೆದ ಜಾತಕದ ದ್ವಿತೀಯಾಧಿಪತಿಯಾದ ಬುಧನು ಮಿತ್ರಕ್ಷೇತ್ರಿ ಹಾಗೂ ಮಿತ್ರನೊಂದಿಗೆ ಇದ್ದಾನೆ. ಅಂದರೆ ರಾಶಿಬಲದವನೂ ಸ್ಥಾನ ಬಲದವನೂ ಇದ್ದಾನೆ. ಆದ್ದರಿಂದ ೧ ಗುಣಕ್ಕೆ ೧ಗುಣ ಲಭಿಸುತ್ತದೆ. ಇನ್ನು ಚತುರ್ಥಾಧಿಪತಿಯು ಚತುರ್ಥದಲ್ಲಿದ್ದಾನೆ ಆದುದರಿಂದ ೧ ಗುಣಕ್ಕೆ ೧ ಗುಣ ಲಭಿಸುತ್ತದೆ. ಇದರಂತೆ ದಶಮಾಧಿಪತಿಯಾದ ಶುಕ್ರನು ರಾಶಿಬಲದವನಿರದೇ ಸ್ಥಾನಬಲದವನಿದ್ದಾನೆ.ಅಲ್ಲದೇ ದಶಮದಲ್ಲಿ ಉಚ್ಚರಾಶಿಯ ಚಂದ್ರನಿದ್ದಾನೆ. ಹೀಗಾಗಿ ೧ಗುಣಕ್ಕೆ ೧ಗುಣ ಲಭಿಸುವದು. ಹೀಗಾಗಿ ಪಿತ್ರಾರ್ಜಿತ ಸೌಖ್ಯಕ್ಕಾಗಿ ಮೀಸಲಾದ ೩ ಗುಣಗಳಲ್ಲಿ ೩ ಗುಣಗಳು ಲಭಿಸುತ್ತವೆ.

ಇನ್ನು ಮೇಲಿನ ಜಾತಕಕ್ಕೆ ಸ್ವಆರ್ಜಿತಕ್ಕಾಗಿ ಮೀಸಲಾದ ೪ಗುಣಗಳಲ್ಲಿ ಎಷ್ಟು ಗುಣಗಳು ಬರಬಹುದೆಂದು ತಿಳಿಯುವಾ. ಸಿಂಹಲಗ್ನದ ಜಾತಕವಿದ್ದು ಈ ಲಗ್ನಕ್ಕೆ ಸ್ವಆರ್ಜಿತಕ್ಕಾಗಿ ಮಂಗಳ, ರವಿ, ಗುರುಗಳ ಬಲಾಬಲದ ಮೇಲೆ ಅವರುಗಳಿಸುವ ಸಾಮರ್ಥ್ಯತಿಳಿಯುತ್ತದೆ. ಮೇಲಿನ ಜಾತಕದಲ್ಲಿ ಯೋಗಕಾರಕಗ್ರಹಗಳಲ್ಲಿ ಮಂಗಳನು ರಾಶಿಬಲದವನೂ ಸ್ಥಾನಬಲದವನೂ ಇದ್ದಾನೆ. ಆದರೆ ಶನಿದೃಷ್ಟತನಿರುವುದರಿಂದ ಅಸ್ಥಿರತೆ ಬಹಳ. ಇಂದು ಸಾಕಷ್ಟುಗಳಿಕೆ ಇದ್ದರೆ ನಾಳೆ ಪೈಸೆಗೂ ಅಭಾವ ಇಷ್ಟು ಅಸ್ಥಿರ. ಹೀಗಾಗಿ ಮಂಗಳನಿಗಾಗಿ ಮೀಸಲಾದ ೨ ಗುಣಗಳಲ್ಲಿ ೧ ಗುಣ ಮಾತ್ರ ಲಭಿಸುತ್ತದೆ. ಇನ್ನು ರವಿಯುಂಲಗ್ನಾಧಿಪತಿಯಾಗಿ ಶತ್ರುಕ್ಷೇತ್ರಿ ಹಾಗೂ ಶತ್ರುವಿನೊಂದಿಗೆ ಇದ್ದಾನೆ. ಆದುದರಿಂದ ರವಿಗಾಗಿ ಮೀಸಲಾದ ೧ ಗುಣಕ್ಕೆ ಶೂನ್ಯ ಗುಣ ಲಭಿಸುತ್ತದೆ. ಇದರಂತೆ ಸಿಂಹಲಗ್ನದ ಮತ್ತೊಂದು ಯೋಗಕಾರಕ ಗ್ರಹವಾದ ಗುರುವು ಸ್ಥಾನಬಲನಿದ್ದು ಲಾಭದಲ್ಲಿ ಇದ್ದಾನೆ. ೧ ಗುಣಕ್ಕೆ ೧ ಗುಣ ಲಭಿಸುತ್ತದೆ. ಒಟ್ಟಿನಲ್ಲಿ ಸ್ವಆರ್ಜಿತದ ೪ ಗುಣಗಳಲ್ಲಿ ೨ ಗುಣಗಳು ಮಾತ ಲಭಿಸುತ್ತವೆ.

ಇದರಂತೆ ಮೇಲಿನ ಜಾತಕಕ್ಕೆ ಆಕಸ್ಮಿಕಧನ ಪ್ರಾಪ್ತಿಗಾಗಿ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ. ಮೇಲಿನ ಜಾತಕದ ಅಷ್ಟಮದಲ್ಲಿ ಯಾವುದೇ ಗ್ರಹವಿರುವುದಲ್ಲಿ ಆದರೆ ಅಷ್ಟಮೇಶ ಲಾಭದಲ್ಲಿದ್ದಾನೆ. ಹಾಗೂ ಪಂಚಮದಲ್ಲಿ ಶುಕ್ರನಿದ್ದಾನೆ. ಪಂಚಮೇಶ, ಅಷ್ಟಮೇಶ ಶತ್ರುಕ್ಷೇತ್ರಿ

ಆದರೆ ಲಾಭದಲ್ಲಿ ಸ್ಥಾನಬಲದವ ಅಲ್ಲದೇ ಶತ್ರುಕ್ಷೇತ್ರಿ ಇದ್ದರೂ ಪಂಚಮ ಸ್ಥಾನದಲ್ಲಿ ಶುಕ್ರನಿದ್ದಾನೆ. ಆದುದರಿಂದ ೧ಗುಣಕ್ಕೆ ೩ಗುಣ ಲಭಿಸುತ್ತವೆ.

ಇನ್ನು ಆಕಸ್ಮಿಕಧನಪ್ರಾಪ್ತಿಯ ಶುಭಯೋಗಗಳಾದ ಗುರು-ಶುಕ್ರರ ಪ್ರತಿಯೋಗ ಲಾಭ-ಪಂಚಮದಲ್ಲಿ. ಪಂಚಮೇಶ ಅಷ್ಟಮೇಶನಾದ ಗುರು ಲಾಭದಲ್ಲಿ ಹೀಗಾಗಿ ಆಕಸ್ಮಿಕಧನಪ್ರಾಪ್ತಿಕೊಡುವ ಶುಭಯೋಗಗಳಿರುವುದ ರಿಂದ ೩ ಗುಣಕ್ಕೆ ೩ ಗುಣಗಳು ಲಭಿಸಿವೆ. ಅಂತೆಯೇ ಇವರಿಗೆ ಭಕ್ತವೃಂದ ದವರಿಂದ ಆಕಸ್ಮಿಕಧನಯೋಗ ಸಾಕಷ್ಟು ಲಭಿಸಿದೆ. ಒಟ್ಟಿನಲ್ಲಿ ಇವರ ಆರ್ಥಿಕ ಸ್ಥಿತಿಯ ಬಗೆಗೆ ಮೀಸಲಾದ ೧೦ ಗುಣಗಳಲ್ಲಿ ಪಿತ್ರಾರ್ಜಿಸೌಖ್ಯದ ೩ ಗುಣ ಗಳು ಸ್ವಅರ್ಜಿತದ ೨ ಗುಣಗಳು ಆಕಸ್ಮಿಕಧನಯೋಗದ ೩ ಗುಣಗಳು ಹೀಗೆ ೮ ಗುಣಗಳು ಲಭಿಸಿವೆ.

### ೫) ಶಿಕ್ಷಣಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರೀ ಎರಡನೇ ಜಾತಕಕ್ಕೆ ಶಿಕ್ಷಣ ದೃಷ್ಟಿಯಿಂದ ಎಷ್ಟು ಗುಣಗಳು ಲಭಿಸಿವೆ ಎಂಬುದನ್ನು ನೋಡುವಾ. ಇದೇ ಗ್ರಂಥದ ಐದನೇ ಅಧ್ಯಾಯದ ೫೧ನೇ ಪುಟದಿಂದ ೫೮ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಶಿಕ್ಷಣದ ಬಗೆಗೆ ಗುಣಮಾಪನ ಮಾಡುವಾಗ ಗುರುವಿನ ಬಲಾಬಲಕ್ಕೆ ೨ಗುಣಗಳನ್ನು ಬಂಧನ ಬಲಾಬಲಕ್ಕೆ ೨ಗುಣಗಳನ್ನು ಪಂಚಮ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಪಂಚಮೇಶನ ಬಲಾಬಲಕ್ಕೆ ೨ ಗುಣಗಳನ್ನು ತೃತೀಯಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ತೃತೀಯೇಶನ ಬಲಾಬಲಕ್ಕೆ ೨ ಗುಣಗಳು ಹೀಗೆ ಶಿಕ್ಷಣಕ್ಕಾಗಿ ೮ ಗುಣಗಳನ್ನು ನಿರ್ಧರಿಸಲಾಗಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಲಭಿಸುತ್ತವೆ. ಎಂಬುದನ್ನು ಪರಿಶೀಲಿಸುವಾ.

ಮೇಲೆ ಬರೆದ ಜಾತಕದಲ್ಲಿ ಗುರುವು ಪಂಚಮಾಧೀಶನಾಗಿ ಲಾಭದಲ್ಲಿದ್ದು ಪಂಚಮಸ್ಥಾನವನ್ನು ನೋಡುತ್ತಾನೆ ಅಂತೆಯೇ ಇವರ ಶಿಕ್ಷಣಕ್ಕೆ ಯಾವುದೇ ವಿಘ್ನಗಳಿಲ್ಲದೇ ಪದವೀಧರರನ್ನಾಗಿ ಮಾಡಿದೆ. ಆದರೆ ಗುರುವಿನ ಗುಣಧರ್ಮ

ದಂತೆ ವೇದಾಂತ, ತತ್ವಜ್ಞಾನ. ಆಧ್ಯಾತ್ಮಿಕ ಶಿಕ್ಷಣದಲ್ಲಿಯೂ ಪಾಂಡಿತ್ಯ ಪಡೆದಿದ್ದರು. ಆದುದರಿಂದ ಗುರುವಿನ ಬಲಾಬಲಕ್ಕೆ ಮೀಸಲಾದ ೨ ಗುಣಗಳಲ್ಲಿ ೨ಗುಣಗಳು ಲಭಿಸುವೆ.

ಇನ್ನು ಇವರ ಜಾತಕದಲ್ಲಿ ಬುಧನು ರಾಶಿಬಲದವನೂ ಸ್ಥಾನಬಲದವನಾಗಿ ಬಲಾಢ್ಯನಿದ್ದ ಮೂಲಕ ಶಿಕ್ಷಣ ಪಡೆಯಲು ತೊಂದರೆಆಗಿಲ್ಲ. ಆದರೆ ಬುಧನ ಗುಣಧರ್ಮದಂತೆ ಇವರು ಲೇಖಕರು ಹಾಗೂ ಸಾಹಿತಿಗಳು ಆಗಿದ್ದಾರೆ.ಒಟ್ಟಿನಲ್ಲಿ ಬುಧನು ಬಲಾಢ್ಯನಿರುವುದರಿಂದ ೨ ಗುಣಗಳಿಗೆ ೨ಗುಣಗಳು ಲಭಿಸಿವೆ.

ಇನ್ನು ಇವರ ಪಂಚಮಸ್ಥಾನದಲ್ಲಿ ಶುಕ್ರನೂ ಸ್ಥಾನಬಲದವನಾಗಿ ರಾಶಿಬಲದವನಿರುವದಿಲ್ಲ. ಇದರಂತೆ ಪಂಚಮೇಶನಾದ ಗುರುಲಾಭದಲ್ಲಿದ್ದು ಪಂಚಮಸ್ಥಾನವನ್ನು ಈಕ್ಷಿಸುತ್ತಾನೆ. ಆದುದರಿಂದ ೨ಗುಣಗಳಿಗೆ ೧ಗುಣ ಲಭಿಸುತ್ತದೆ.

ಇನ್ನು ತೃತೀಯಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ ತೃತೀಯಾಧೀಶನು ಸ್ಥಾನಬಲವನಿರುವದಲ್ಲದೇ ತೃತೀಯಾಧೀಶನನು ಗುರುವು ನೋಡುತ್ತಾನೆ. ಆದ್ದರಿಂದ ೨ಗುಣಗಳಿಗೆ ೧ಗುಣಲಭಿಸುತ್ತದೆ. ಹೀಗೆ ಶಿಕ್ಷಣ ದೃಷ್ಟಿಯಿಂದ ಈ ಜಾತಕಕ್ಕೆ ೮ ಗುಣಗಳಲ್ಲಿ ೬ಗುಣಗಳು ಲಭಿಸಿದಂತಾಗಿವೆ.

### ೬) ಉದ್ಯೋಗಕ್ಕೆ ಪಡೆದ ಗುಣಗಳು :

ಮೇಲೆ ಬರೆದ ವಾದರೀ ೨ನೇ ಜಾತಕಕ್ಕೆ ಉದ್ಯೋಗದೃಷ್ಟಿಯಿಂದ ಎಷ್ಟುಗುಣಗಳು ಬರಬಹುದೆಂಬುದನ್ನು ತಿಳಿದುಕೊಳ್ಳಲು ಆರನೇಅಧ್ಯಾಯದ ೫೯ನೇ ಪುಟದಿಂದ ೬೬ನೇ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಉದ್ಯೋಗದ ಬಗೆಗೆ ಗುಣಮಾಪನಮಾಡುವಾಗ ದಶಮಸ್ಥಾನದಲ್ಲಿಯ ಗ್ರಹ ಹಾಗೂ ದಶಮೇಶನ ಬಲಾಬಲಕ್ಕೆ ೩.ಗುಣಗಳನ್ನು, ಲಗ್ನದಲ್ಲಿರುವ ಗ್ರಹ ಹಾಗೂ ಲಗ್ನೇಶನ ಬಲಾಬಲಕ್ಕೆ ೧ಗುಣವು, ಪಂಚಮಸ್ಥಾನದಲ್ಲಿರುವ ಗ್ರಹ ಹಾಗೂ ಪಂಚಮೇಶನ ಬಲಾಬಲಕ್ಕೆ ೧ ಗುಣವು, ದ್ವಿತೀಯಸ್ಥಾನದಲ್ಲಿರುವ

ಗ್ರಹ ಹಾಗೂ ದ್ವಿತೀಯೇಶನ ಬಲಾಬಲಕ್ಕೆ ೧ ಗುಣವು. ತೃತೀಯಸ್ಥಾನ ಹಾಗೂ ತೃತೀಯೇಶನ ಬಲಾಬಲಕ್ಕೆ ೧ಗುಣವು. ಚತುರ್ಥಸ್ಥಾನ ಹಾಗೂ ಚತುರ್ಥೇಶನ ಬಲಾಬಲಕ್ಕೆ ೧ ಗುಣವು. ಹೀಗೆ ಆರುಸಂಗತಿಗಳಿಂದ ಗುಣ ಮಾಪನಮಾಡಬೇಕು. ಹಾಗೂ ಈ ಆರುಸಂಗತಿಗಳಿಗೆ ೮ ಗುಣಗಳನ್ನು ನಿರ್ಧರಿಸಲಾಗಿದ್ದು ಇವುಗಳಲ್ಲಿ ಈ ಮೇಲಿನ ಜಾತಕಕ್ಕೆ ಎಷ್ಟುಗುಣ ಲಭಿಸುವವು ಎಂಬುದನ್ನು ತಿಳಿಯುವಾ.

ಮೇಲೆ ಬರೆದ ಜಾತಕಕ್ಕೆ ದಶಮದಲ್ಲಿ ಬಲಾಢ್ಯಚಂದ್ರನಿದ್ದಾನೆ. ಆದರೆ ದಶಮೇಶನಾದ ಶುಕ್ರನು ರಾಶಿಬಲದವನಿರದೇ ಸ್ಥಾನಬಲದವನಿದ್ದಾನೆ. ಆದುದರಿಂದ ೩ ಗುಣಗಳಿಗೆ ೨ ಗುಣಗಳು ಲಭಿಸುತ್ತವೆ.

ಇನ್ನು ಶತ್ರುಕ್ಷೇತ್ರಿ ಹಾಗೂ ಶತ್ರುಯುಕ್ತನಾಗಿ ಲಗ್ನೇಶನಿರುವನಲ್ಲದೇ ಲಗ್ನದಲ್ಲಿ ಯಾವುದೇ ಗ್ರಹವಿರುವುದಿಲ್ಲವಾದುದರಿಂದ ೧ ಗುಣಕ್ಕೆ ಶೂನ್ಯ ಗುಣಲಭಿಸುತ್ತದೆ.

ಇನ್ನು ದ್ವಿತೀಯಸ್ಥಾನದಲ್ಲಿ ಯಾವುದೇ ಗ್ರಹವಿರದೇ ದ್ವಿತೀಯೇಶನಾದ ಬುಧನು ರಾಶಿಬಲದವನೂ ಸ್ಥಾನಬಲದವನೂ ಇರುವುದರಿಂದ ೧ ಗುಣಕ್ಕೆ ೧ ಗುಣಲಭಿಸುತ್ತದೆ.

ಇನ್ನು ತೃತೀಯಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ ತೃತೀಯೇಶನು ಸ್ಥಾನಬಲದನಿದ್ದು ರಾಶಿಬಲದವನಿರುವುದಿಲ್ಲ. ಆದ್ದರಿಂದ ೧ಗುಣಕ್ಕೆ ೧/೨ಗುಣ ಲಭಿಸುತ್ತದೆ.

ಪಂಚಮದಲ್ಲಿ ಸ್ಥಾನಬಲದವ ಶುಕ್ರನಿದ್ದು ಪಂಚಮೇಶನಾದ ಗುರುವು ಸ್ಥಾನಬಲದವ ಮಾತ್ರನಿದ್ದಾನೆ. ಹೀಗಾಗಿ ೧ ಗುಣಕ್ಕೆ ೧ ಗುಣ ಲಭಿಸುತ್ತದೆ.

ಇನ್ನು ಚತುರ್ಥೇಶನಾದ ಕುಜನು ಚತುರ್ಥದಲ್ಲಿ ಸ್ಥಾನಬಲದವನೂ ರಾಶಿಬಲದವನೂ ಯೋಗಕಾರಕವಾಗಿಯೂ ಬಲಾಢ್ಯನಿದ್ದಾನೆ. ಆದರೆ ಶನಿಯೊಂದಿಗೆ ಅಂಶಾತ್ಮಕ ದೃಷ್ಟಿಯೋಗದಿಂದಾಗಿ ೧ ಗುಣಕ್ಕೆ ೩/೪ ಗುಣಗಳು

ಲಭಿಸುತ್ತವೆ. ಹೀಗೆ ಉದ್ಯೋಗಕ್ಕೆ ಮೀಸಲಾದ ೮ ಗುಣಗಳಲ್ಲಿ ೫ ಗುಣಗಳು ಲಭಿಸುತ್ತವೆ.

## ೨) ಸಂತಾನ (ಸೌಖ್ಯ)ಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರೀ ೨ನೇ ಜಾತಕಕ್ಕೆ ಸಂತಾನಸೌಖ್ಯದೃಷ್ಟಿಯಿಂದ ಎಷ್ಟು ಗುಣಗಳನ್ನು ಪಡೆದಿದ್ದಾರೆ ಎಂಬುವದನ್ನು ಕಂಡುಕೊಳ್ಳಲು ಈ ಗ್ರಂಥದ ಎಳನೇ ಅಧ್ಯಾಯದ ೬೭ನೇ ಪುಟ ದಿಂದ ೭೩ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಸಂತಾನಸೌಖ್ಯದ ವಿಷಯುವಾಗಿ ಗುಣಮಾಪನ ಮಾಡುವಾಗ ಪಂಚಮೇಶ ಹಾಗೂ ಪಂಚಮಸ್ಥಾನದಲ್ಲಿರುವ ಗ್ರಹಗಳ ಬಲಾಬಲಕ್ಕೆ ೩ ಗುಣಗಳು, ಗುರುವಿನ ಬಲಾಬಲಕ್ಕೆ೩ ಗುಣಗಳು, ಸಂತತೀ ಪೋಷಕ ಯೋಗಗಳಿಗೆ ೨ ಗುಣಗಳು ಹೀಗೆ ೮ ಗುಣಗಳನ್ನು ನಿರ್ಧರಿಸ ಲಾಗಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಪರಿಶಿಲಿಸುವಾ.

ಮೇಲೆ ಬರೆದ ಜಾತಕದ ಪಂಚಮಸ್ಥಾನದಲ್ಲಿ ಸ್ಥಾನಬಲವಿದ್ದು ರಾಶಿ ಬಲವಿಲ್ಲದಿರುವ ಶುಕ್ರನಿದ್ದಾನೆ ಪಂಚಮೇಶನಾದ ಗುರುವು ಸ್ಥಾನಬಲದವ ನಿದ್ದಾನೆ. ಆದರೆ ಪಂಚಮಸ್ಥಾನನೋಡುತ್ತಾನೆ. ಹೀಗಾಗಿ ೩ ಗುಣಗಳಲ್ಲಿ ೨ ಗುಣಗಳು ಲಭಿಸುತ್ತವೆ.

ಇನ್ನು ಸಂತತೀ ಪೋಷಕ ಗ್ರಹವಾದ ಗುರುವು ಸ್ಥಾನಬಲದವನಿದ್ದು ಪಂಚಮಸ್ಥಾನವನ್ನು ನೋಡುತ್ತಾನೆ. ಆದ್ದರಿಂದ ೩ಗುಣಗಳಿಗೆ ೨ಗುಣಗಳು ಲಭಿಸುತ್ತವೆ.

ಇನ್ನು ಗುರು–ಶುಕ್ರರ ಪ್ರತಿಯೋಗವು ಪಂಚಮಭಾವದಲ್ಲಿರುವುದು ಸಂತತೀಸೌಖ್ಯದ ಪೋಷಕ ಯೋಗವು.ಆದರೆ ಇಬ್ಬರೂ ಸ್ಥಾನಬಲದವರಿದ್ದು ರಾಶಿಬಲದವರು ಇರುವುದಿಲ್ಲ. ಆದ್ದರಿಂದ ೨ ಗುಣಕ್ಕೆ ೧ಗುಣ ಲಭಿಸುತ್ತದೆ, ಹೀಗೆ ಸಂತತೀಸೌಖ್ಯಕ್ಕೆ ಮೀಸಲಾದ ೮ ಗುಣಗಳಲ್ಲಿ ೫ ಗುಣಗಳು ಲಭಿಸುತ್ತವೆ.

ಸಂತತೀಸೌಖ್ಯ ವೆಂದರೆ ಕೇವಲ ಹೊಟ್ಟೆಯಲ್ಲಿ ಜನಿಸಿದಮಕ್ಕಳಿಂದಲೇ ಸೌಖ್ಯಎಂದು ಅರ್ಥಮಾಡದೇ ದತ್ತಕಮಗನಸೌಖ್ಯ, ಸಾಕುಮಗನಸೌಖ್ಯ, ಅಣ್ಣನಮಕ್ಕಳ, ತಮ್ಮನಮಕ್ಕಳು, ಅಕ್ಕನಮಕ್ಕಳಸೌಖ್ಯ ಎಂದು ಅರ್ಥ

ಮಾಡಬೇಕು. ಅಂತೆಯೇ ಈ ಬ್ರಹ್ಮಚಾರಿ ಅವಧೂತ ರಾಮರಾವ ಹೇಜೀಬರಿಗೆ ಅಣ್ಣನಮಕ್ಕಳಸೌಖ್ಯ ಸಾಕಷ್ಟುಲಭಿಸಿದೆ.

**೮) ಭಾಗ್ಯಕ್ಕೆ ಪಡೆದ ಗುಣಗಳು :**

ಮೇಲೆ ಬರೆದ ಮಾದರೀ ೨ನೇ ಜಾತಕವು ಭಾಗ್ಯ ದೃಷ್ಟಿಯಿಂದ ಎಷ್ಟು ಗುಣಗಳನ್ನು ಪಡೆದಿದ್ದಾರೆ ಎಂಬುದನ್ನು ಕಂಡುಕೊಳ್ಳಲು ಎಂಟನೇ ಅಧ್ಯಾಯದ ೭೫ನೇ ಪುಟದಿಂದ ೮೧ನೇ ಪುಟದವರೆಗೆ ವಿವರಿಸಿದಂತೆ ಭಾಗ್ಯೇಶನ ಬಲಾಬಲಕ್ಕೆ ೪ ಗುಣಗಳನ್ನು ಭಾಗ್ಯಸ್ಥಾನದಲ್ಲಿರುವ ಗ್ರಹಕ್ಕೆ ೨ಗುಣಗಳನ್ನು ಭಾಗ್ಯಪೋಷಕಯೋಗಗಳಿಗೆ ೨ ಗುಣಗಳನ್ನು ಹೀಗೆ ೮ ಗುಣ ಗಳನ್ನು ನಿರ್ಧರಿಸಿದ್ದು ಅವುಗಳಲ್ಲಿ ಜಾತಕಕ್ಕೆ ಎಷ್ಟುಗುಣಗಳು ಲಭಿಸುವವು ಎಂಬುದನ್ನು ಪರಿಶೀಲಿಸುವಾ.

ಮೇಲೆ ಬರೆದ ಮಾದರೀ ೨ನೇ ಜಾತಕದಲ್ಲಿ ಭಾಗ್ಯೇಶನಾದ ಕುಜನು ಸ್ಥಾನಬಲದವನೂ ರಾಶಿಬಲದವನೇನೋ ಇದ್ದಾನೆ. ಆದರೆ ಶನಿಯೊಂದಿಗೆ ಅನ್ಯೋನ್ಯದೃಷ್ಟಿಯಲ್ಲಿಯು ಅಶುಭಯೋಗದಿಂದಾಗಿ ೪ ಗುಣಗಳಲ್ಲಿ ೨ಗುಣ ಗಳು ಮಾತ್ರಲಭಿಸುತ್ತದೆ.

ಇನ್ನು ಭಾಗ್ಯಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲವಾದುದರಿಂದ ಭಾಗ್ಯಸ್ಥಾನಕ್ಕೆ ಮೀಸಲಾದ ೨ ಗುಣಗಳಲ್ಲಿ ಶೂನ್ಯಗುಣಗಳು ಲಭಿಸುತ್ತವೆ.

ಭಾಗ್ಯಪೋಷಕ ಯಾವ ಯೋಗವು ಇರುವುದಿಲ್ಲವಾದುದರಿಂದ ಇದಕ್ಕೆ ಮೀಸಲಾದ ೨ ಗುಣಗಳು ಶೂನ್ಯಗುಣಗಳು ಲಭಿಸುತ್ತವೆ. ಹೀಗೆ ಭಾಗ್ಯಕ್ಕೆ ನಿರ್ಧರಿಸಿದ ಗುಣಗಳಲ್ಲಿ ಕೇವಲ ೨ ಗುಣಗಳು ಮಾತ್ರ ಲಭಿಸಿರುವುದರಿಂದ ಇವರುಭಾಗ್ಯವಂತರೇನೋ ಅಲ್ಲ ಸುದೈವಿಗಳು ಅಲ್ಲ. ಹೋರಾಟದಾಯ ಜೀವನದ ಜಾತಕವು. ಅಂತೆಯೇ ಸಿದ್ಧಿಪಡೆಯಲು ಅನೇಕ ವರುಷಗಳ ವರೆಗೆ ಧ್ಯಾನಮಾಡಬೇಕಾಯಿತು,

## ೯) ಶತ್ರು-ಮಿತ್ರ, ಸಹೋದರ-ಸಹೋದರೀಯರ ಸೌಖ್ಯಕ್ಕಾಗಿ ಪಡೆದ ಗುಣಗಳು :

ಮೇಲೆ ಬರೆದ ಮಾದರೀ ಎರಡನೇ ಜಾತಕದಲ್ಲಿ ಶತ್ರು-ಮಿತ್ರರ, ಸಹೋದರ-ಸಹೋದರೀಯರ ಸೌಖ್ಯದ ದೃಷ್ಟಿಯಿಂದ ಎಷ್ಟು ಗುಣಗಳನ್ನು ಪಡೆದಿದ್ದಾರೆ. ಎಂಬುದನ್ನು ಅರಿಯಲು ಈ ಗ್ರಂಥದ ಒಂಬತ್ತನೆ ಅಧ್ಯಾಯದ ೮೨ನೇ ಪುಟದಿಂದ ೯೧ನೇ ಪುಟದವರೆಗೆ ವಿವರಿಸಿದಂತೆ ತೃತೀಯಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ತೃತಿಯೇಶನ ಬಲಾಬಲಕ್ಕಾಗಿ ೨ ಗುಣಗಳನ್ನು, ಷಷ್ಠ ಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ಷಷ್ಠೇಶನ ಬಲಾಬಲಕ್ಕಾಗಿ ೨ ಗುಣಗಳನ್ನು ಲಾಭಸ್ಥಾನದಲ್ಲಿಯ ಗ್ರಹಗಳ ಬಲಾಬಲ, ಹಾಗೂ ಲಾಭೇಶನ ಬಲಾಬಲಕ್ಕಾಗಿ ೨ ಗುಣಗಳನ್ನು, ಶತ್ರು-ಮಿತ್ರ, ಸಹೋದರ-ಸಹೋದರಿಯರ, ಸೌಖ್ಯದ ಪೋಷಕ ಯೋಗಗಳಿಗಾಗಿ ೨ ಗುಣಗಳನ್ನು ಹೀಗೆ ೮ ಗುಣಗಳನ್ನು ನಿರ್ಧರಿಸಲಾಗಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ದೊರೆಯುಬಹುದೆಂಬುದನ್ನು ಪರಿಶೀಲಿಸುವಾ.

ಮೇಲೆ ಬರೆದ ಜಾತಕದಲ್ಲಿ ಷಷ್ಠದಲ್ಲಿ ಕೇತು ಮಿತ್ರಕ್ಷೇತ್ರಿಯನಾಗಿ ಬಲಾಢ್ಯ ನಿರುವುದರಿಂದ ೧ಗುಣಕ್ಕೆ೧ಗುಣಲಭಿಸುತ್ತದೆ. ಆದರೆ ಷಷ್ಠೇಶನಾದ ಶನಿಯು ಸ್ವಕ್ಷೇತ್ರಿಯನಾಗಿ ರಾಶಿಬಲದವನೂ ಸ್ಥಾನಬಲದವನೇನೋ ಇದ್ದಾನೆ. ಆದರೆ ರವಿಯೊಂದಿಗೆ ಅಂದರೆ ಶತ್ರುಯುಕ್ತ ನಿರುವುದರಿಂದ ೧ ಗುಣಕ್ಕೆ ¾ ಗುಣಗಳು ಲಭಿಸುತ್ತವೆ. ಹೀಗೆ ಶತ್ರುದಮನಕ್ಕಾಗಿ ೨ಗುಣಗಳಲ್ಲಿ 1¾ ಗುಣಗಳು ಲಭಿಸುತ್ತವೆ.

ಇನ್ನು ಲಾಭೇಶನಾದಬುಧನು ಮಿತ್ರಕ್ಷೇತ್ರಿ ಹಾಗೂ ಮಿತ್ರನೊಂದಿಗೆ ಇರುವುದರಿಂದ ೧ ಗುಣಕ್ಕೆ ೧ ಗುಣಲಭಿಸುತ್ತದೆ. ಅಲ್ಲದೇ ಲಾಭದಲ್ಲಿ ಗುರು ಗ್ರಹವಿರುವುದು ಮಿತ್ರ ವೃದ್ಧಿಯಾಗುತ್ತದೆ. ಲಾಭದಲ್ಲಿ ಯಾವುದೇ ಗ್ರಹ ವಿದ್ದರೂ ಶುಭಫಲವೇನೋ ಕೊಡುತ್ತದೆ ಆದುದರಿಂದ ೧ ಗುಣಕ್ಕೆ ೧ ಗುಣ ಲಭಿಸುತ್ತದೆ. ಹೀಗೆ ಮಿತ್ರಸೌಖ್ಯಕ್ಕಾಗಿ ಮೀಸಲಾದ ೨ ಗುಣಗಳಲ್ಲಿ ೨ ಗುಣ ಲಭಿಸುತ್ತದೆ.

ಇನ್ನು ತೃತೀಯ ಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ,ಆದರೆ ತೃತಿಯೇಶನು ಸ್ಥಾನಬಲದವನಿದ್ದು ರಾಶಿಬಲದವನಿರುವುದಿಲ್ಲ. ಆದಾಗ್ಯೂ ಗುರು ದೃಷ್ಟಿತನಿರುವದರಿಂದ ೨ ಗುಣಕ್ಕೆ ೨ ಗುಣ ಲಭಿಸುತ್ತದೆ. ಹೀಗೆ ಸಹೋದರ ಸಹೊದರಿಯರ ಸೌಖ್ಯಕ್ಕಾಗಿ ೨ ಗುಣಗಳಲ್ಲಿ ೨ಗುಣ ಲಭಿಸುತ್ತದೆ. ಒಟ್ಟಿನಲ್ಲಿ ಶತ್ರು–ಮಿತ್ರ, ಸಹೋದರ– ಸಹೋದರೀಯ ಸೌಖ್ಯಕ್ಕಾಗಿ ಮೀಸಲಾದ ೮ ಗುಣಗಳಲ್ಲಿ ೫½ ಗುಣಗಳು ಲಭಿಸುತ್ತವೆ.

## ೧೦) ಶುಭ–ಅಶುಭಯೋಗಗಳಿಗಾಗಿ ಪಡೆದ ಗುಣಗಳು :

ಮೇಲೆ ಬರೆದ ಜಾತಕದಲ್ಲಿಯ ಶುಭ–ಅಶುಭಯೋಗಗಳಿಗಾಗಿ ಮೀಸಲಾದ ೧೦ ಗುಣಗಳಲ್ಲಿ ಎಷ್ಟು ಗುಣಗಳನ್ನು ಪಡದಿದ್ದಾರೆ ಎಂಬುದನ್ನು ತಿಳಿಯಲು ಇದೇ ಗ್ರಂಥದ ಹತ್ತನೆ ಅಧ್ಯಾಯದ ೯೨ನೇ ಪುಟದಿಂದ ೧೦೧ನೇ ಪುಟದ ವರಗೆ ವಿವರಿಸಿದಂತೆ ಎಷ್ಟು ಗುಣಗಳನ್ನು ಪಡೆದಿದ್ದಾರೆ ಎಂಬುದನ್ನು ನೋಡುವಾ.

ಹೇಳಿಕೊಳ್ಳುವಂಥ ಯಾವುದೇ ಶುಭಯೋಗವಿರುದಿಲ್ಲ ಗುರು–ಶುಕ್ರರ ಪ್ರತಿಯೋಗವು ಲಾಭ, ಪಂಚಮದಲ್ಲಿರುವುದು ಶುಭಯೋಗಗಳಲ್ಲಿ ಒಂದು ಆದ್ದರಿಂದ ೫ ಗುಣಗಳನ್ನು ಕೂಡಿಸಬೇಕು. ಆದರೆ ಶನಿ– ಮಂಗಳರ ಋಣಾತ್ಮಕ ಅನ್ಯೋನ್ಯದೃಷ್ಟಿಯೋಗ ಚತುರ್ಥ ಸಪ್ತಮದಲ್ಲಿರುವುದು. ಹಾಗೂ ರವಿ–ಶನಿಯರ ಗ್ರಹಯೋಗ ಸಪ್ತಮದಲ್ಲಿರುವುದು. ಅಶುಭಯೋಗಗಳು. ಆದುದರಿಂದ ೫ ಗುಣಗಳನ್ನು ಕಳೆಯಬೇಕು ಒಟ್ಟಿನಲ್ಲಿ ಶುಭ–ಅಶುಭಯೋಗಗಳಿಗಾಗಿ ಮೀಸಲಾದ ೧೦ ಗುಣಗಳಲ್ಲಿ ಶೂನ್ಯ ಗುಣಗಳು ಲಭಿಸಿದಂತಾಯಿತು.

## ೧೧) ಕುಂಡಲಿ ವರ್ಗೀಕರಣದಲ್ಲಿ ಯಾವ ವರ್ಗದ್ದು ಎಂಬುದನ್ನು ತಿಳಿಯುವಾ :

ಇದೇ ಗ್ರಂಥದ ಹನ್ನೊಂದನೇಯ ಅಧ್ಯಾಯದ ೧೦೨ನೇಯ ಪುಟದಲ್ಲಿ ವಿವರಿಸಿದಂತೆ ಈ ಎರಡನೇ ಮಾದರೀ ಜಾತಕವು ಯಾವವರ್ಗದಲ್ಲಿ ಬರುತ್ತದೆಂಬುದನ್ನು ನೋಡುವಾ.

೧) ಆರೋಗ್ಯ ಹಾಗೂ ಆಯುಷ್ಯವರ್ಧನಕ್ಕಾಗಿ ಮೀಸಲಾದ ೧೦ ಗುಣಗಳಲ್ಲಿ $5\frac{1}{2}$ ಗುಣಗಳು

೨) ಮಾತೃ ಸೌಖ್ಯಕ್ಕೆ ಮೀಸಲಾದ ೧೫ಗುಣಗಳಲ್ಲಿ $8\frac{1}{2}$ ಗುಣಗಳು ಲಭಿಸಿವೆ

೩) ಪತಿ ಹಾಗೂ ಪತ್ನಿಯ ಸೌಖ್ಯಕ್ಕೆ ಮೀಸಲಾದ ೧೫ ಗುಣಗಳಲ್ಲಿ ಕೇವಲ $3\frac{1}{2}$ ಗುಣಗಳು

೪) ಆರ್ಥಿಕಸ್ಥಿತಿಯು ಬಗೆಗೆ ಮೀಸಲಾದ ೧೨ ಗುಣಗಳಲ್ಲಿ ೮ ಗುಣಗಳು

೫) ಶಿಕ್ಷಣಕ್ಕಾಗಿ ಮೀಸಲಾದ ೮ ಗುಣಗಳಲ್ಲಿ ೬ ಗುಣಗಳು

೬) ಉದ್ಯೋಗಕ್ಕಾಗಿ ಮೀಸಲಾದ ೮ ಗುಣಗಳಲ್ಲಿ ೬ ಗುಣಗಳು

೭) ಸಂತಾನ (ಸಂತತಿ) ಸೌಖ್ಯಕಾಗಿ ಮೀಸಲಾದ ೮ಗುಣಗಳಲ್ಲಿ ೫ ಗುಣಗಳು

೮) ಭಾಗ್ಯಕ್ಕಾಗಿ ಮೀಸಲಾದ ೮ ಗುಣಗಳಲ್ಲಿ ೨ಗುಣಗಳು

೯) ಶತ್ರು-ಮಿತ್ರ, ಸಹೋದರ-ಸಹೋದರಿಯರ ಸೌಖ್ಯಕ್ಕಾಗಿ ಮೀಸಲಾದ ೮ ಗುಣಗಳಲ್ಲಿ ೫½ ಗುಣಗಳು

೧೦) ಶುಭ – ಅಶುಭ ಯೋಗಗಳಿಗಾಗಿ ಮೀಸಲಾದ ೧೨ ಗುಣಗಳಲ್ಲಿ ಶೂನ್ಯಗಳನ್ನು

ಒಟ್ಟಿನಲ್ಲಿ ೧೦೦ ಗುಣಗಳಲ್ಲಿ ೫೦ ಗುಣಗಳು ಲಭಿಸಿರುವದರಿಂದ ಇದು ಬಿ. ಗ್ರೇಡಿನ ಜಾತಕವು. ಲೌಕಿಕ ದೃಷ್ಟಿಯಿಂದ ಆಧ್ಯಾತ್ಮಿಕ ದೃಷ್ಟಿಯಿಂದ ಎ ಗ್ರೇಡ ಜಾತಕವು.

## ಮಾದರಿ ೩

೩೧-೧೨-೧೯೫೧ ನೇ ಇಸ್ವಿ ಪ್ರಾತಃಕಾಲ ೪ರಿಂದ ೫-೩೦ ವೃಶ್ಚಿಕ ಲಗ್ನ ಮಕರರಾಶಿ ಶ್ರವಣಾನಕ್ಷತ್ರದಲ್ಲಿ ಜನಿಸಿದ ಈ ಜಾತಕವನ್ನು ನೋಡಿರಿ.

ಲಗ್ನಕುಂಡಲಿ




ಇನ್ನು ಈ ಜಾತಕವನ್ನು ಈ ಗ್ರಂಥದಲ್ಲಿ ವಿವರಿಸಿದಂತೆ ದಶವಿಧದೃಷ್ಟಿ ಕೋನಗಳಿಂದ ಮೌಲ್ಯಮಾಪನವನ್ನು ಮಾಡುವಾ.

## ೧) ಆರೋಗ್ಯ ಹಾಗೂ ಆಯುರ್ಮಾನಕ್ಕೆ ಪಡೆದ ಗುಣಗಳು :

ಆರೋಗ್ಯ ಹಾಗೂ ಆಯುರ್ಮಾನದ ದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು. ಎಂಬುದನ್ನು ತಿಳಿಯಲು ಈ ಗ್ರಂಥದ ಒಂದನೇ ಅಧ್ಯಾಯದ ೭ನೆಯ ಪುಟದಿಂದ ೧೭ನೆಯ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಆರೋಗ್ಯದ ಬಗೆಗೆ ಗುಣಮಾಪನ ಮಾಡುವಾಗ ಲಗ್ನ ಹಾಗೂ ಲಗ್ನೇಶನ ಬಲಾಬಲಕ್ಕೆ ೨ ಗುಣಗಳು. ಷಷ್ಠಸ್ಥಾನ ಹಾಗೂ ಷಷ್ಠೇಶನ ಬಲಾಬಲಕ್ಕೆ ೨ ಗುಣಗಳು. ಅಷ್ಟಮಸ್ಥಾನ ಅಷ್ಟಮೇಶನ ಬಲಾಬಲಕ್ಕೆ ೨ ಗುಣಗಳು. ಸೂರ್ಯನ ಬಲಾಬಲಕ್ಕೆ ೨ ಗುಣಗಳು. ಚಂದ್ರನ ಬಲಾಬಲಕ್ಕೆ ೨ ಗುಣಗಳು. ಹೀಗೆ ೧೦ ಗುಣಗಳಿದ್ದು ಮೇಲಿನ ಮಾದರಿ ೩ನೇ ಜಾತಕಕ್ಕೆ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕಕ್ಕೆ ಲಗ್ನದಲ್ಲಿ ಅಂದರೆ ತನುಸ್ಥಾನದಲ್ಲಿ ಬುಧ. ಶುಕ್ರರಿದ್ದಾರೆ ಬುಧ,ಶುಕ್ರರು ಸ್ಥಾನಬಲದವರಿದ್ದರೂ ರಾಶಿಬಲದವರಿರುವು ದಿಲ್ಲವಾದುದರಿಂದ ೧ ಗುಣಕ್ಕೆ ½ ಗುಣಗಳು ಲಭಿಸುತ್ತದೆ. ಇನ್ನು ಲಗ್ನೇಶ ಕುಜನು ಸ್ಥಾನಬಲದವನಿದ್ದಾನೆ. ಆದರೆ ರಾಶಿಬಲದವನಿರುವುದಿಲ್ಲ ಅಲ್ಲದೇ

ಶತ್ರುವಿನೊಂದಿಗೆ ಇದ್ದಾನೆ. ಆದುದರಿಂದ ೧ ಗುಣಕ್ಕೆ ½ ಗುಣಗಳು ಲಭಿಸುತ್ತವೆ.

ಇನ್ನು ಷಷ್ಠದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಆದರೆ ಷಷ್ಠೇಶನಾದ ಕುಜನು ಸ್ಥಾನಬಲದವನಾಗಿದ್ದರೂ ರಾಶಿಬಲದವನಿರುವುದಿಲ್ಲವಾದುದರಿಂದ ೨ ಗುಣದಲ್ಲಿ ೧ ಗುಣಲಭಿಸುತ್ತದೆ.

ಇನ್ನು ಅಷ್ಟಮಸ್ಥಾನದಲ್ಲಿಯೂ ಯಾವುದೇ ಗ್ರಹವಿರುವುದಿಲ್ಲ. ಆದರೆ ಅಷ್ಟಮೇಶನಾದ ಬುಧನು ಸ್ಥಾನಬಲದವನಿದ್ದು ರಾಶಿಬಲದವನಿರುವುದಿಲ್ಲ ಆದುದರಿಂದ ೨ ಗುಣಕ್ಕೆ ೧ ಗುಣ ಲಭಿಸುತ್ತದೆ.

ಇನ್ನು ಸೂರ್ಯಭಗವಾನನು ರಾಶಿಬಲವನೂ ಸ್ಥಾನಬಲದವನೂ (ಮಿತ್ರಕ್ಷೇತ್ರೀ) ಇರುವುದರಿಂದ ೨ ಗುಣಕ್ಕೆ ೨ ಗುಣಲಭಿಸುತ್ತದೆ.

ಇದರಂತೆ ಚಂದ್ರನು ರಾಶಿಬಲವವನೂ ಸ್ಥಾನಬಲವವನೂ ಇರುವುದಿಲ್ಲವಾದುದರಿಂದ ೨ ಗುಣಕ್ಕೆ ಶೂನ್ಯಗುಣ ಲಭಿಸುತ್ತದೆ.

ಹೀಗೆ ಆರೋಗ್ಯ ದೃಷ್ಟಿಯಿಂದ ಈ ಜಾತಕಕ್ಕೆ ೧೦ ಗುಣಗಳಲ್ಲಿ ೫ ಗುಣಗಳು ಲಭಿಸಿದಂತಾಯಿತು.

ಇನ್ನು, ಲಗ್ನ ಲಗ್ನೇಶ, ಷಷ್ಠ,ಷಷ್ಠೇಶ,ಅಷ್ಟಮ,ಅಷ್ಟಮೇಶ,ಸೂರ್ಯ, ಚಂದ್ರ, ಈ ಎಂಟು ಸಂಗತಿಗಳಲ್ಲಿ ಚಂದ್ರನ ಹೊರತಾಗಿ ಉಳಿದ ಏಳು ಸಂಗತಿಗಳು ಪೂರಕವಿರುವುದರಿಂದ ಈ ಜಾತಕವು ದೀರ್ಘಾಯು ಜಾತಕ ವಿರುತ್ತದೆ.

## ೨) ಮಾತೃಸೌಖ್ಯಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೩ನೇ ಜಾತಕಕ್ಕೆ ಮಾತೃಸೌಖ್ಯ ದೃಷ್ಟಿಯಿಂದ ಎಷ್ಟು ಗುಣಗಳು ಬರಬಹುದೆಂಬುದನ್ನು ಅರಿಯಲು ಈ ಗ್ರಂಥದ ೨ನೇಯ ಅಧ್ಯಾಯದ ೧೮ನೇ ಪುಟದಿಂದ ೨೪ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಮಾತೃಸೌಖ್ಯದ ವಿಷಯವಾಗಿ ಚತುರ್ಥಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ಚತುರ್ಥೇಶನ ಬಲಾಬಲಕ್ಕೆ ೪ಗುಣಗಳು. ಬಲಾಢ್ಯ ಚಂದ್ರನಿಗೆ ೪ ಗುಣಗಳು. ಬಲಾಢ್ಯ ಶುಕ್ರನಿಗೆ ೩ ಗುಣಗಳು ಬಲಾಢ್ಯ ಗುರುವಿಗೆ ೨ ಗುಣಗಳು ಮತ್ತು ಮಾತೃಸೌಖ್ಯದ ಪೋಷಕಯೋಗಗಳಿಗೆ

೩ ಗುಣಗಳು ಹೀಗೆ ಮಾತೃಸೌಖ್ಯಕ್ಕೆ ೧೫ಗುಣಗಳಿದ್ದು. ಈ ಮೇಲಿನ ೩ನೇ ಮಾದರೀ ಜಾತಕಕ್ಕೆ ಎಷ್ಟು ಗುಣಗಳು ಬರಬಹುದೆಂಬುದನ್ನು ನೋಡುವಾ.

ಪಾಪಗ್ರಹಗಳಲ್ಲಿ ಒಂದಾದ ರಾಹು ಚತುರ್ಥಸ್ಥಾನದಲ್ಲಿರುವುದು ಮಾತೃಸೌಖ್ಯಕ್ಕೆ ಮಾರಕವು. ಆದುದರಿಂದ ೨ ಗುಣಗಳಲ್ಲಿ ಶೂನ್ಯಗುಣ ಲಭಿಸುತ್ತವೆ. ಇನ್ನು ಚತುರ್ಥೇಶನಾದ ಶನಿಯು ಸ್ಥಾನಬಲದವನೇನೋ ಇದ್ದಾನೆ. ಮಿತ್ರಕ್ಷೇತ್ರಿ ಮೂಲಕ ರಾಶಿಬಲದವನೂ ಇದ್ದಾನೆ. ಆದರೆ ಶತ್ರುವಿನೊಂದಿಗಿದ್ದಾನೆ. ಆದುದರಿಂದ ೨ ಗುಣಗಳಿಗೆ ೧ ಗುಣ ಮಾತ್ರ ಲಭಿಸುತ್ತದೆ.

ಮಾತೃಸೌಖ್ಯದ ಪ್ರಮುಖ ಪೋಷಕ ಗ್ರಹವಾದ ಚಂದ್ರನು ರಾಶಿಬಲದವನಿರದೆ ಶತ್ರುಕ್ಷೇತ್ರಿ ಇದ್ದಾನೆ. ಸ್ಥಾನಬಲದವನೂ ಇರುವುದಿಲ್ಲ ಆದುದ ೮೦೧ ಗುಣಗಳಿಗೆ ಶೂನ್ಯಗುಣಲಭಿಸುತ್ತದೆ.

ಇವರಂತೆ ಮಾತೃಸೌಖ್ಯದ ಪೋಷಕ ಗ್ರಹವಾದ ಶುಕ್ರನು ಸ್ಥಾನಬಲದವನೇನೋ ಇದ್ದಾನೆ ಆದರೆ ರಾಶಿಬಲದವನಿಲ್ಲ. ಆದುದರಿಂದ ೩ ಗುಣಕ್ಕೆ 1½ ಗುಣಲಭಿಸುತ್ತವೆ.

ಇನ್ನು ಮಾತೃಸೌಖ್ಯ ಪೋಷಕ ಮತ್ತೊಂದು ಗ್ರಹವಾದ ಗುರುವು ಸ್ಥಾನಬಲದವನೂ ರಾಶಿಬಲದವನೂ ಇದ್ದಾನೆ. ಆದುದರಿಂದ ೨ ಗುಣಗಳಿಗೆ ೨ಗುಣಲಭಿಸುತ್ತದೆ.

ಮಾತೃಸೌಖ್ಯದ ಪೋಷಕ ಯೋಗಗಳಾದ ಗುರು–ಶುಕ್ರರ ತ್ರಿಕೋಣ ಯೋಗವು ಲಗ್ನ, ಪಂಚಮದಲ್ಲಿರುವುದರಿಂದ ೨ ಗುಣಕ್ಕೆ ೨ ಗುಣಗಳು ಲಭಿಸುತ್ತವೆ. ಹೀಗೆ ಮಾತೃಸೌಖ್ಯದ ೧೫ ಗುಣಗಳಲ್ಲಿ 7½ ಲಭಿಸುತ್ತವೆ.

**೩) ಪತಿ ಹಾಗೂ ಪತ್ನೀಸೌಖ್ಯಕ್ಕೆ ಪಡೆದ ಗುಣಗಳು :**

ಮೇಲೆ ಬರೆದ ಮಾದರೀ ೩ನೇ ಜಾತಕಕ್ಕೆ ಪತ್ನಿ ಸೌಖ್ಯದ ವಿಷಯವಾಗಿ ಎಷ್ಟುಗುಣಗಳು ಲಭಿಸಬಹುದೆಂಬುದನ್ನು ತಿಳಿಯಲು ಇದೇ ಗ್ರಂಥದ ಮೂರನೇ ಅಧ್ಯಾಯದ ೨೫ ನೇ ಪುಟದಿಂದ ೩೧ನೇ ಪುಟದವರೆಗೆ ವಿವರಿಸಿ

ದಂತೆ ಪತಿ ಪತ್ನಿಸೌಖ್ಯಕ್ಕೆ ೧೫ ಗುಣಗಳಿದ್ದು, ಅವುಗಳಲ್ಲಿ ಸಪ್ತಮಸ್ಥಾನ ದಲ್ಲಿಯ ಗ್ರಹಗಳ ಬಲಾಬಲಕ್ಕೆ ೨ ಗುಣಗಳು ಸಪ್ತಮೇಶನ ಬಲಾಬಲಕ್ಕೆ ೪ ಗುಣಗಳು. ಶುಕ್ರನಬಲಾಬಲಕ್ಕೆ ೪ ಗುಣಗಳು ಗುರುವಿನ ಬಲಾಬಲಕ್ಕೆ ೩ ಗುಣಗಳು ಪತಿ – ಪತ್ನಿಸೌಖ್ಯದ ಶುಭಯೋಗಗಳಿಗೆ ೨ ಗುಣಗಳು. ಹೀಗೆ ೧೫ ಗುಣಗಳಿದ್ದು, ಮೇಲಿನ ೩ನೇ ಮಾದರಿ ಜಾತಕಕ್ಕೆ ಎಷ್ಟು ಗುಣ ಗಳುಬರಬಹುದೆಂಬುದನ್ನು ನೋಡುವಾ.

ಮೇಲಿರ ಜಾತಕಕ್ಕೆ ಸಪ್ತಮಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ ವಾದುದರಿಂದ ಇದಕ್ಕಾಗಿ ಮೀಸಲಾದ ೨ಗುಣಗಳಿಗೆ ಶೂನ್ಯಗುಣ ಬರುತ್ತದೆ.

ಇನ್ನು ಸಪ್ತಮೇಶನು ರಾಶಿಬಲದವನಿರದೆ ಸ್ಥಾನಬಲದವನಿದ್ದು. ಮಿತ್ರನೊಂದಿಗೆ ಸಪ್ತಮಸ್ಥಾನವನ್ನು ನೋಡುತ್ತಾನೆ ಅದಕ್ಕಾಗಿ ೪ ಗುಣ ಗಳಲ್ಲಿ ೨ಗುಣಗಳು ಲಭಿಸುತ್ತವೆ.

ಇನ್ನು ನೈಸರ್ಗಿಕವಾಗಿ ಪತಿ–ಪತ್ನಿಸೌಖ್ಯದ ಪೋಷಕ ಗ್ರಹವಾದ ಶುಕ್ರನು ರಾಶಿಬಲದವನಿರದೆ ಸ್ಥಾನಬಲದವನಿದ್ದು, ತನ್ನಸ್ಥಾನವಾದ ಸಪ್ತಮ ವನ್ನು ಈಕ್ಷಿಸುತ್ತಿದ್ದಾನೆ. ಆದುದರಿಂದ ಶುಕ್ರನಿಗಾಗಿ ಮೀಸಲಾದ ೪ ಗುಣ ಗಳಲ್ಲಿ ೨ಗುಣಗಳು ಲಭಿಸುತ್ತದೆ.

ಇದರಂತೆ ಪತ್ನೀಸೌಖ್ಯದ ಪೋಷಕವಾದ ಅರ್ಥಾತ್ ಸುಖಕರ ವೈವಾಹಿಕ ಜೀವನಕ್ಕೆ ಪೋಷಕ ಮತ್ತೊಂದು ಗ್ರಹವಾದ ಗುರುವು ರಾಶಿ ಬಲದವನೂ ಸ್ಥಾನಬಲದವನೂ ಇರುವುದರಿಂದ ಗುರುವಿಗಾಗಿ ಮೀಸಲಾದ ೩ ಗುಣಗಳಲ್ಲಿ ೩ ಗುಣಗಳು ಲಭಿಸುತ್ತವೆ.

ಪತಿ– ಪತ್ನೀಸೌಖ್ಯಕ್ಕೆ ಶುಭಯೋಗಗಳಲ್ಲಿ ಒಂದಾದ ಗುರು– ಶುಕ್ರರ ನವಪಂಚಮ (ಸಪ್ತಮೇಶ, ಪಂಚಮೇಶ, ದ್ವಿತೀಯೇಶ ಗ್ರಹಯೋಗ) ಯೋಗವು ಲಗ್ನ ಪಂಚಮದಲ್ಲಿರುವುದರಿಂದ ಅದಕ್ಕಾಗಿ ಮೀಸಲಾದ ೨ಗುಣ ಗಳಲ್ಲಿ ೨ಗುಣಗಳು ಲಭಿಸುತ್ತವೆ. ಹೀಗೆ ಪತ್ನೀಸೌಖ್ಯಕ್ಕಿರುವ ೧೫ಗುಣಗಳಲ್ಲಿ ೯ ಗುಣಗಳು ಲಭಿಸಿದಂತಾಯಿತು.

## ೪) ಆರ್ಥಿಕಸ್ಥಿತಿಯ ಬಗೆಗೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೩ನೇ ಜಾತಕಕ್ಕೆ ಆರ್ಥಿಕಸ್ಥಿತಿಯ ಎಷ್ಟುಗುಣಗಳು ಲಭಿಸಬಹುದೆಂಬುದನ್ನು ಕಂಡಕೊಳ್ಳಲು ಇದೇ ಗ್ರಂಥದ ನಾಲ್ಕನೇ ಅಧ್ಯಾಯದ ೩೨ನೇ ಪುಟದಿಂದ ೫೦ನೇ ಪುಟದ ವರೆಗೆ ವಿವರಿಸಿದಂತೆ ಪ್ರತಿಯೊಬ್ಬನ ಆರ್ಥಿಕಸ್ಥಿತಿಯ ಬಗೆಗೆ ಗುಣಪಾಪನಮಾಡುವಾಗ ಪಿತ್ರಾರ್ಜಿತ ಸೌಖ್ಯಕ್ಕೆ ೩ಗುಣಗಳು ಸ್ವಅರ್ಜಿತಕ್ಕಾಗಿ ೪ ಗುಣಗಳು, ಆಕಸ್ಮಿಕಧನಯೋಗಕ್ಕೆ ೩ ಗುಣಗಳು ಹೀಗೆ ೧೦ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಬರಬಹುದೆಂಬುದನ್ನು ನೋಡುವಾ

ಮೇಲೆ ಬರೆದ ಜಾತಕಕ್ಕೆ ದ್ವಿತೀಯೇಶನು ರಾಶಿಬಲದವನೂ ಸ್ಥಾನಬಲದವನೂ ಇದ್ದು, ಬಲಾಢ್ಯನಿದ್ದಾನೆ. ಅದಕ್ಕಾಗಿ ೧ಗುಣಕ್ಕೆ ೧ಗುಣ ಬರುತ್ತದೆ. ಇನ್ನು ಚತುರ್ಥದಲ್ಲಿ ರಾಹು ಇರುವುದು ಶುಭವಲ್ಲ ಆದರೆ ಚತುರ್ಥೇಶನು ಲಾಭದಲ್ಲಿರುವುದು ಹಣಕಾಸಿನ ದೃಷ್ಟಿಯಿಂದ ಶುಭವು (ಶತ್ರುಕೂಡ ಇದ್ದಾಗ್ಯೂ) ಆದುದರಿಂದ ೧ಗುಣಕ್ಕೆ ½ ಗುಣ ಲಭಿಸುತ್ತದೆ. ಇದರಂತೆ ದಶಮೇಶನಸ್ಥಾನದಲ್ಲಿ ಶತ್ರುಕ್ಷೇತ್ರಿ ಕೇತು ಇದ್ದಾನೆ. ಆದರೆ ದಶಮೇಶನು ರಾಶಿಬಲದವನೂ ಸ್ಥಾನಬಲದವನೂ ಇದ್ದಾನೆ. ಅದಕ್ಕಾಗಿ ½ ಗುಣ ಲಭಿಸುತ್ತದೆ. ಹೀಗಾಗಿ ಪಿತ್ರಾರ್ಜಿತಕ್ಕಾಗಿ ನಿರ್ಧರಿಸಿದ ೩ ಗುಣಗಳಲ್ಲಿ ೨ಗುಣಗಳು ಲಭಿಸಿದಂತಾಯಿತು.

ಇನ್ನು ಮೇಲಿನ ಜಾತಕಕ್ಕೆ ಸ್ವಅರ್ಜಿತಕ್ಕಾಗಿ ಎಷ್ಟುಗುಣಗಳು ಬರಬಹುದೆಂಬುದನ್ನು ನೋಡುವಾ. ಮೇಲಿನ ಜಾತಕವು ವೃಶ್ಚಿಕ ಲಗ್ನದ್ದಿರುತ್ತದೆ. ಈ ಲಗ್ನಕ್ಕೆ ರವಿ, ಚಂದ್ರ, ಶನಿ, ಗುರುಗಳು ಕ್ರಮಶಃ ಸ್ವಅರ್ಜಿತ ಪೋಷಕ ಗ್ರಹಗಳು. ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದರೆ ಮಾತ್ರ ೪ಗುಣಗಳಿಗೆ ೪ ಗುಣಗಳು ಲಭಿಸುತ್ತವೆ. ಮೇಲಿನ ಜಾತಕದಲ್ಲಿ ರವಿ, ಗುರು,ಸ್ಥಾನಬಲದವರೂ ರಾಶಿಬಲದವರೂ ಇದ್ದರೆ. ಶನಿಸ್ಥಾನಬಲದವನೂ ರಾಶಿಬಲದವನೂ ಇದ್ದಾಗ್ಯೂ ಶತ್ರುವಿನೊಂದಿಗಿದ್ದಾನೆ ಚಂದ್ರನು. ದುರ್ಬಲನಿದ್ದಾನೆ. ಆದುದರಿಂದ ೪ ಗುಣಗಳಲ್ಲಿ ೩ ಗುಣಲಭಿಸುತ್ತವೆ.

ಇನ್ನು ಈ ಜಾತಕಕ್ಕೆ ಆಕಸ್ಮಿಕ ಧನಯೋಗಕ್ಕೆ ಮೀಸಲಾದ ೩ ಗುಣಗಳಲ್ಲಿ ಅಷ್ಟಮಸ್ಥಾನ ಹಾಗೂ ಅಷ್ಟಮೇಶನ ಬಲಾಬಲಕ್ಕೆ ೧ ಗುಣ ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲಕ್ಕೆ ೧ ಗುಣ. ಆಕಸ್ಮಿಕ ಧನಯೋಗದ ಯೋಗಗಳಿಗೆ ೧ ಗುಣ. ಹೀಗಿದ್ದು ಮೇಲಿನ ಜಾತಕಕ್ಕೆ ಆಕಸ್ಮಿಕ ಧನಯೋಗಕ್ಕೆ ಎಷ್ಟು ಗುಣಗಳು ಬರಬಹುದೆಂಬುದನ್ನು ನೋಡುವಾ. ಈ ಜಾತಕಕ್ಕೆ ಅಷ್ಟಮ ಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಅಲ್ಲದೇ ಅಷ್ಟಮಾಧೀಶನು ಕೂಡ ರಾಶಿಬಲವಿಲ್ಲದೇ ಸ್ಥಾನಬಲದವನಿದ್ದಾನೆ. ಆದ್ದರಿಂದ ½ ಗುಣ ಲಭಿಸುತ್ತದೆ. ಇನ್ನು ಪಂಚಮದಲ್ಲಿ ಗುರುವಿದ್ದಾನೆ. ಪಂಚಮಾಧೀಶ ಬಲಾಢ್ಯನಿದ್ದಾನೆ. ಹೀಗಾಗಿ ೧ ಗುಣಕ್ಕೆ ೧ ಗುಣ ಲಭಿಸುತ್ತವೆ. ಇನ್ನು ಗುರು,ಶುಕ್ರರ ನವ ಪಂಚಮ ಲಗ್ನ ಪಂಚಮದಲ್ಲಿ ಇರುವ ಶುಭಯೋಗವು ಆದ್ದರಿಂದ ೧ ಗುಣಕ್ಕೆ ೧ ಗುಣಲಭಿಸುತ್ತದೆ. ಹೀಗೆ ೩ ಗುಣಕ್ಕೆ 2½ ಗುಣಗಳು ಲಭಿಸುತ್ತವೆ.

ಒಟ್ಟಿನಲ್ಲಿ ಮೇಲಿನ ಜಾತಕದ ಆರ್ಥಿಕಸ್ಥಿತಿಯ ಗುಣಗಳಲ್ಲಿ ಪಿತ್ರಾರ್ಜಿತಕ್ಕೆ ೨ ಗುಣಗಳು ಸ್ವಆರ್ಜಿತಕ್ಕೆ ೩ ಗುಣಗಳು, ಆಕಸ್ಮಿಕ ಧನಯೋಗಕ್ಕೆ 2½ ಗುಣ. ಹೀಗೆ ೧೦ ಗುಣಗಳಲ್ಲಿ 7½ ಗುಣಗಳು ಲಭಿಸುತ್ತವೆ.

### ಇ) ಶಿಕ್ಷಣಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಜಾತಕಕ್ಕೆ ಶಿಕ್ಷಣದೃಷ್ಟಿಯಿಂದ ಎಷ್ಟು ಗುಣಗಳು ಲಭಿಸುವವು ಎಂಬುದನ್ನು ಕಂಡುಕೊಳ್ಳಲು ಐದನೇ ಅಧ್ಯಾಯದ ೫೧ನೇ ಪುಟದಿಂದ ೫೨ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಶಿಕ್ಷಣದ ಬಗೆಗೆ ಗುಣದ ಮಾಪನ ಮಾಡುವಾಗ ಗುರುವಿನ ಬಲಾಬಲಕ್ಕೆ ೨ ಗುಣಗಳನ್ನು ಬುಧ ಬಲಾಬಲಕ್ಕೆ ೨ ಗುಣಗಳನ್ನು ಪಂಚಮಸ್ಥಾನದಲ್ಲಿರುವ ಗ್ರಹ ಹಾಗೂ ಪಂಚಮೇಶನ ಬಲಾಬಲಕ್ಕೆ ೨ ಗುಣಗಳನ್ನು ತೃತೀಯಸ್ಥಾನದಲ್ಲಿಯ ಗ್ರಹ ಹಾಗೂ ತೃತೀಯೇಶನ ಬಲಾಬಲಕ್ಕೆ ೨ ಗುಣಗಳನ್ನು ಹೀಗೆ ಶಿಕ್ಷಣಕ್ಕೆ ೮ ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಲಭಿಸಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕಕ್ಕೆ ಗುರುವು ರಾಶಿಬಲದವನೂ ಸ್ಥಾನಬಲದವನೂ ಇರುವುದರಿಂದ ೨ ಗುಣಕ್ಕೆ ೨ ಗುಣಲಭಿಸುತ್ತದೆ.

ಇನ್ನು ಬುಧನು ರಾಶಿ ಬಲದವನಿರದೇ ಸ್ಥಾನ ಬಲದವನಿರುವುದರಿಂದ ೨ ಗುಣಕ್ಕೆ ೧ ಗುಣಲಭಿಸುತ್ತದೆ.

ಪಂಚಮಸ್ಥಾನದಲ್ಲಿ ಬಲಾಢ್ಯ ಗುರುವಿದ್ದಾನೆ, ಪಂಚಮೇಶನು ಬಲಾಢ್ಯನಿದ್ದಾನೆ. ಆದುದರಿಂದ ೨ ಗುಣಕ್ಕೆ ೨ ಗುಣಗಳು ಲಭಿಸುತ್ತವೆ.

ಇನ್ನು ತೃತೀಯಸ್ಥಾನದಲ್ಲಿ ನಿರ್ಬಲ ಚಂದ್ರನಿದ್ದಾನೆ ತೃತಿಯೇಶಕೂಡ ಸ್ಥಾನಬಲ ರಾಶಿಬಲವಿದ್ದಾಗ್ಯೂ ಶತ್ರುವಿನೊಂದಿಗೆ ಇದ್ದಾನೆ. ಆದ್ದರಿಂದ ½ಗುಣ ಲಭಿಸುತ್ತದೆ.

ಹೀಗೆ ಶಿಕ್ಷಣದೃಷ್ಟಿಯಿಂದ ೮ ಗುಣಗಳಲ್ಲಿ 5½ ಗುಣಗಳು ಲಭಿಸಿದಂತಾಗಿದೆ.

## ೬) ಉದ್ಯೋಗದ ಬಗೆಗೆ ಪಡೆದ ಗುಣಗಳು :

ಮೇಲೆ ಬರೆದ ಮಾದರೀ ೩ನೇ ಜಾತಕಕ್ಕೆ ಉದ್ಯೋಗದೃಷ್ಟಿಯಿಂದ ಎಷ್ಟುಗುಣಗಳು ಲಭಿಸಬಹುದೆಂಬುದನ್ನು ಅರಿತುಕೊಳ್ಳಲು ಇದೇ ಗ್ರಂಥದ ಆರನೇಯ ಅಧ್ಯಾಯಂತ ೫೯ನೇ ಪುಟದಿಂದ ೬೬ನೇ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಉದ್ಯೋಗದ ಬಗೆಗೆ ಗುಣಮಾಪನಮಾಡುವಾಗ ದಶಮಸ್ಥಾನದಲ್ಲಿರುವ ಗ್ರಹ ಹಾಗೂ ದಶಮೇಶನ ಬಲಾಬಲಕ್ಕೆ ೩ ಗುಣಗಳನ್ನು ಲಗ್ನ ಹಾಗೂ ಲಗ್ನೇಶನ ಬಲಾಬಲಕ್ಕೆ ೧ ಗುಣ, ದ್ವಿತಿಯಸ್ಥಾನ ಹಾಗೂ ದ್ವಿತಿಯೇಶನ ಬಲಾಬಲಕ್ಕೆ ೧ ಗುಣ ಪಂಚಮಸ್ಥಾನ ಹಾಗೂ ಪಂಚಮೇಶನ ಬಲಾಬಲಕ್ಕೆ ೧ ಗುಣ, ಚತುರ್ಥಸ್ಥಾನ ಹಾಗೂ ಚತುರ್ಥೇಶನ ಬಲಾಬಲಕ್ಕೆ ೧ ಗುಣ ತೃತೀಯಸ್ಥಾನ ಹಾಗೂ ತೃತೀಯೇಶನ ಬಲಾಬಲಕ್ಕೆ ೧ ಗುಣ ಹೀಗೆ ೮ ಗುಣಗಳಿದ್ದು ಮೇಲಿನ ಮಾದರೀ ೩ನೇ ಜಾತಕಕ್ಕೆ ಎಷ್ಟುಗುಣಗಳು ಬರಬಹುದೆಂಬುದನ್ನು ಪರಿಶೀಲಿಸುವಾ.

ಮೇಲೆ ಬರೆದ ಜಾತಕದಲ್ಲಿ ದಶಮದಲ್ಲಿ ಶತ್ರುಕ್ಷೇತ್ರಿ ಕೇತುವಿದ್ದಾನೆ. ಆದರೆ ದಶಮೇಶನಾದ ಸೂರ್ಯನು ಬಲಾಢ್ಯನಿದ್ದಾನೆ. ಆದುದರಿಂದ ೩ ಗುಣಕ್ಕೆ 1½ ಗುಣಗಳು ಬರುತ್ತವೆ.

ಇನ್ನು ಲಗ್ನದಲ್ಲಿ ರಾಶಿಬಲವಿಲ್ಲದ ಸ್ಥಾನಬಲವಿದ್ದ ಬುಧ ಶುಕ್ರರಿದ್ದಾರೆ. ಆದರೆ ಲಗ್ನೇಶನೂ ಸ್ಥಾನಬಲದವನೂ ಇದ್ದರೂ ರಾಶಿಬಲದವನಿರುವುದಿಲ್ಲ. ಅಲ್ಲದೇ ಶತ್ರುಯುಕ್ತನಿದ್ದಾನೆ. ಆದುದರಿಂದ ೧ ಗುಣಕ್ಕೆ ½ ಗುಣಗಳು ಲಭಿಸುತ್ತವೆ.

ಇನ್ನು ದ್ವಿತಿಯಸ್ಥಾನದಲ್ಲಿ ಬಲಾಢ್ಯ ರವಿ ಇದ್ದಾನೆ. ದ್ವಿತೀಯೇಶನೂ ಬಲಾಢ್ಯನಿದ್ದಾನೆ. ಆದುದರಿಂದ ೧ ಗುಣಕ್ಕೆ ೧ ಗುಣದೊರೆಯುತ್ತದೆ. ಇನ್ನು ಪಂಚಮದಲ್ಲಿ ಬಲಾಢ್ಯ ಗುರುವಿದ್ದಾನೆ ಪಂಚಮೇಶನೂ ಬಲಾಢ್ಯನಿದ್ದಾನೆ ಆದುದರಿಂದ ೧ ಗುಣಕ್ಕೆ ೧ ಗುಣ ಲಭಿಸುತ್ತದೆ. ಇನ್ನು ಚತುರ್ಥದಲ್ಲಿ ಮಿತ್ರ ಕ್ಷೇತ್ರಿ ರಾಹು ಇದ್ದಾನೆ. ಚತುರ್ಥೇಶನೂ ಸ್ಥಾನಬಲ ರಾಶಿಬಲವವನಿದ್ದರೂ ಶತ್ರುಯುಕ್ತನಿದ್ದಾನೆ. ಆದ್ದರಿಂದ ೧ ಗುಣಕ್ಕೆ ½ ಗುಣದೊರೆಯುತ್ತದೆ. ಇದರಂತೆ ತೃತೀಯದಲ್ಲಿ ಚಂದ್ರನಿದ್ದಾನೆ ತೃತೀಯೇಶನು ಸ್ಥಾನಬಲ ರಾಶಿ ಬಲದವನಿದ್ದಾನೆ. ಆದ್ದರಿಂದ ೧ಗುಣಕ್ಕೆ ½ ಗುಣದೊರೆಯುತ್ತದೆ. ಒಟ್ಟಿನಲ್ಲಿ ಉದ್ಯೋಗದೃಷ್ಟಿಯಿಂದ ಈ ಜಾತಕಕ್ಕೆ ೮ ಗುಣಗಳಲ್ಲಿ ೫ ಗುಣಗಳು ಲಭಿಸುತ್ತವೆ.

## ೨) ಸಂತಾನ (ಸೌಖ್ಯ) ಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೩ನೇ ಜಾತಕಕ್ಕೆ ಸಂತಾನ ಸೌಖ್ಯದೃಷ್ಟಿಯಿಂದ ಎಷ್ಟು ಗುಣಗಳು ಲಭಿಸಿವೆ. ಎಂಬುದನ್ನು ಅರಿಯಲು ಇದೇ ಗ್ರಂಥದ ಏಳನೇ ಅಧ್ಯಾಯದ ೬೭ನೇ ಪುಟದಿಂದ ೭೩ನೇ ಪುಟದವರೆಗೆ ವಿವರಿಸಿದಂತೆ ಪಂಚಮ ಸ್ಥಾನದಲ್ಲಿಯ ಗ್ರಹ ಹಾಗೂ ಪಂಚಮೇಶನ ಬಲಾಬಲಕ್ಕೆ ೩ ಗುಣ ಗಳು, ಸಂತತೀ ಪೋಷಕ ಗ್ರಹವಾದ ಗುರುವಿನ ಬಲಾಬಲಕ್ಕೆ ೩ ಗುಣಗಳು ಸಂತತೀಸೌಖ್ಯದ ಪೋಷಕಯೋಗಗಳಿಗೆ ೨ ಗುಣಗಳು ಹೀಗೆ ೮ ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ದೊರೆಯಬಹುದೆಂಬುದನ್ನು ತಿಳಿದು ಕೊಳ್ಳುವಾ.

ಮೇಲೆ ಬರೆದಜಾತಕದ ಪಂಚಮದಲ್ಲಿ ಸ್ಥಾನಬಲ ರಾಶಿಬಲದವ ಗುರು ವಿದ್ದಾನೆ. ಅಲ್ಲದೇ ಪಂಚಮೇಶನೂ ಬಲಾಢ್ಯನಿದ್ದಾನೆ. ಹೀಗಾಗಿ ೩ ಗುಣಕ್ಕೆ ೩ಗುಣಗಳು ದೊರೆಯುತ್ತದೆ,

ಇನ್ನು ಸಂತತೀ ಪೋಷಕ ಗ್ರಹವಾದ ಗುರುವು ರಾಶಿಬಲದವನೂ ಸ್ಥಾನಬಲದವನೂ ಯೋಗಕಾರಕನೂ ಇದ್ದು ಸಂತತೀ ಸ್ಥಾನದಲ್ಲಿಯೇ ಬಲಾಢ್ಯನಾಗಿದ್ದಾನೆ. ಆದ್ದರಿಂದ ೩ ಗುಣಕ್ಕೆ ೩ ಗುಣ ಲಭಿಸುತ್ತದೆ.

ಇನ್ನು ಸಂತತೀ ಪೋಷಕ ಯೋಗಗಳಾದ ಗುರು—ಶುಕ್ರರ ನವ ಪಂಚಮವು ಲಗ್ನ-ಪಂಚಮದಲ್ಲಿದೆ. ಆದ್ದರಿಂದ ೨ ಗುಣಕ್ಕೆ ೨ ಗುಣಗಳು ಬರುತ್ತವೆ.ಒಟ್ಟನಲ್ಲಿ ಸಂತತೀ ಸೌಖ್ಯದ ದೃಷ್ಟಿಯಿಂದ ಈ ಜಾತಕನು ಸುದೈವಿ ಇದ್ದು ೮ ಗುಣಗಳಿಗೆ ೮ ಗುಣಗಳು ಲಭಿಸುತ್ತವೆ.

## ೯) ಭಾಗ್ಯಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರೀ ೩ನೇ ಜಾತಕವು ಭಾಗ್ಯ ದೃಷ್ಟಿಯಿಂದ ಎಷ್ಟು ಗುಣಗಳನ್ನು ಪಡೆದಿದೆ ಎಂಬುದನ್ನು ಅರಿಯಲು ಇದೇ ಗ್ರಂಥದ ಎಂಟನೇಯ ಅಧ್ಯಾಯದ ೭೪ನೇ ಪುಟದಿಂದ ೭೭ನೇ ಪುಟದವರೆಗೆ ವಿವರಿಸಿದಂತೆ ಭಾಗ್ಯೇಶನ ಬಲಾಬಲಕ್ಕೆ ೪ ಗುಣಗಳು ಭಾಗ್ಯಸ್ಥಾನದಲ್ಲಿರುವ ಗ್ರಹಕ್ಕೆ ೨ ಗುಣಗಳು ಭಾಗ್ಯಪೋಷಕಯೋಗಗಳಿಗೆ ೨ ಗುಣಗಳು ಹೀಗೆ ೮ ಗುಣಗಳಿದ್ದು ಮೇಲಿನ ೩ನೇ ಮಾದರೀ ಜಾತಕಕ್ಕೆ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ.

ಮೇಲಿನ ಜಾತಕ ಭಾಗ್ಯೇಶನಾದ ಚಂದ್ರನು ದುರ್ಬಲನಿದ್ದಾಗ್ಯೂ ಭಾಗ್ಯಸ್ಥಾನವನ್ನು ನೋಡುತ್ತಾನೆ. ಆದ್ದರಿಂದ ೪ ಗುಣಕ್ಕೆ ೨ ಗುಣಗಳು ಲಭಿಸುವವು.

ಇನ್ನು ಭಾಗ್ಯಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲವಾದುದರಿಂದ ೨ ಗುಣಗಳಿಗೆ ಶೂನ್ಯಗುಣ ದೊರೆಯುತ್ತದೆ.

ಇದರಂತೆ ಭಾಗ್ಯಪೋಷಕ ಯೋಗಗಳೊಂದಾದ ಲಾಭೇಶ, ಪಂಚಮೇಶರ ನವಪಂಚಮಯೋಗ ಲಾಭೇಶ- ದ್ವಿತೀಯೇಶರ ನವಪಂಚಮ, ಪಂಚಮೇಶ ಸುಖೇಶರ ಪ್ರತಿಯೋಗ ಪಂಚಮೇಶ ಲಗ್ನೇಶ ಪ್ರತಿಯೋಗ

**ಹೀಗೆ ಭಾಗ್ಯ ಪೋಷಕ** ಯೋಗಗಳಿರುವುದರಿಂದ ೨ ಗುಣಗಳಿಗೆ ೨ ಗುಣಗಳು **ಲಭಿಸುತ್ತವೆ.** ಒಟ್ಟಿನಲ್ಲಿ ಭಾಗ್ಯದೃಷ್ಟಿಯಿಂದ ೮ ಗುಣಗಳಿಗೆ ೪ ಗುಣಗಳು **ಲಭಿಸುತ್ತವೆ.**

**೯) ಶತ್ರು-ಮಿತ್ರರ, ಸಹೋದರ-ಸಹೋದರೀಯರ ಸೌಖ್ಯ ವಿಷಯವಾಗಿ ಪಡೆದ ಗುಣಗಳು :**

**ಮೇಲೆ** ಬರೆದ **ಮಾದರೀ** ಮೂರನೇ ಜಾತಕದಲ್ಲಿ ಶತ್ರು-ಮಿತ್ರ, **ಸಹೋದರ-** ಸಹೋದರಿಯರ, ಸೌಖ್ಯದದೃಷ್ಟಿಯಿಂದ ಎಷ್ಟುಗುಣಗಳನ್ನು ಪಡೆದಿದ್ದಾರೆ ಎಂಬುದನ್ನು ಕಂಡುಕೊಳ್ಳಲು ಇದೇ ಗ್ರಂಥದ ಒಂಬತ್ತನೇ ಅಧ್ಯಾಯದ ೮೨ನೇ ಪುಟದಿಂದ ೯೧ನೇ ಪುಟದ ವರೆಗೆ ವಿವರಿಸಿದಂತೆ ತೃತೀಯಸ್ಥಾನ ಹಾಗೂ ತೃತೀಯೇಶನ ಬಲಾಬಲಕ್ಕೆ ೨ ಗುಣಗಳು ಷಷ್ಠ ಸ್ಥಾನ ಹಾಗೂ ಷಷ್ಠೇಶನ ಬಲಾಬಲಕ್ಕೆ ೨ ಗುಣಗಳು ಲಾಭಸ್ಥಾನ ಹಾಗೂ ಲಾಭೇಶನ ಬಲಾಬಲಕ್ಕೆ ೨ ಗುಣಗಳು. ಶತ್ರು-ಮಿತ್ರ, ಸಹೋದರ-ಸಹೋದರೀಯರ ಸೌಖ್ಯದ ಶುಭಯೋಗಗಳಿಗೆ ೨ ಗುಣಗಳು ಹೀಗೆ ೮ಗುಣಗಳಿದ್ದು ಮೇಲಿನ ೩ನೆಯ ಜಾತಕಕ್ಕೆ ಎಷ್ಟುಗುಣಗಳು ಲಭಿಸಬಹುದೆಂಬುದನ್ನು ಪರಿಶೀಲಿಸುವಾ.

ಮೇಲೆ ಬರೆದ ಜಾತಕದ ಷಷ್ಠದಲ್ಲಿ ಯಾವುದೇ ಗ್ರಹವಿರುವುದಿಲ್ಲ ಆದರೆ ಷಷ್ಠೇಶನಾದ ಕುಜನು ಲಾಭದಲ್ಲಿದ್ದು ಸ್ಥಾನಬಲದವನಿದ್ದು ರಾಶಿಬಲದವನಿರುವದಿಲ್ಲ. ಅಲ್ಲದೇ ಶತ್ರುಯುಕ್ತನಾಗಿದ್ದಾನೆ. ಆದ್ದರಿಂದ ೨ ಗುಣಕ್ಕೆ ೧ ಗುಣ ಲಭಿಸುತ್ತದೆ.

ಇನ್ನು ಲಾಭದಲ್ಲಿ ಶನಿ ಮಂಗಳರಿದ್ದಾರೆ. ಇಲ್ಲಿ ಶನಿಯು ಸ್ಥಾನಬಲದವನೂ ರಾಶಿಬಲದವ (ಮಿತ್ರಕ್ಷೇತ್ರಿ) ಆದರೆ ಮಂಗಳನುಸ್ಥಾನಬಲದವ ಮಾತ್ರ ನಿದ್ದಾನೆ. ಲಾಭೇಶನಾದ ಬುಧನು ಸ್ಥಾನಬಲದವನಿದ್ದು ರಾಶಿಬಲದವನಿರುವದಿಲ್ಲ ಹೀಗಾಗಿ ೨ ಗುಣಗಳಲ್ಲಿ ೧ ಗುಣ ಮಾತ್ರ ಲಭಿಸುತ್ತದೆ.

ತೃತೀಯದಲ್ಲಿ ಚಂದ್ರನಿದ್ದಾನೆ.ಆದರೆ ತೃತೀಯೇಶನು ಸ್ಥಾನಬಲದವನೂ ರಾಶಿಬಲದವನಿದ್ದಾನೆ. ಆದ್ದರಿಂದ ೨ ಗುಣಕ್ಕೆ ೨ ಗುಣಮಾತ್ರಲಭಿಸುತ್ತದೆ.

ಇನ್ನು ಶತ್ರು-ಮಿತ್ರ, ಸಹೋದರ-ಸಹೋದರಿಯರ ಶುಭಯೋಗಗಳು ಒಂದೂ ಇರುವುದಿಲ್ಲವಾದ್ದರಿಂದ ಅದಕ್ಕಾಗಿ ಮೀಸಲಾದ ೨ ಗುಣಗಳಲ್ಲಿ ಶೂನ್ಯಗುಣಗಳು ಲಭಿಸುತ್ತದೆ. ಹೀಗೆ ಶತ್ರು-ಮಿತ್ರ, ಸಹೋದರ-ಸಹೋದರೀಯರ ಸೌಖ್ಯದ ವಿಷಯಕ್ಕಾಗಿರುವ ೮ ಗುಣಗಳಲ್ಲಿ ೪ ಗುಣಗಳು ಮಾತ್ರ ಲಭಿಸಿವೆ.

## ೧೦) ಶುಭ-ಅಶುಭಯೋಗಳಿಗಾಗಿ ಪಡೆದ ಗುಣಗಳು :

ಮೇಲೆ ಬರೆದ ೩ನೇ ಮಾದರೀಯ ಜಾತಕವು ಶುಭಾ- ಅಶುಭಯೋಗ ಗಾಗಿ ಎಷ್ಟುಗುಣಗಳು ಪಡೆದಿವೆ ಎಂಬುದನ್ನು ತಿಳಿಯಲು ಇದೇ ಗ್ರಂಥದ ಹತ್ತನೇ ಅದ್ಯಾಯದ ೯೨ನೇ ಪುಟದಿಂದ ೧೨೧ನೇ ಪುಟದ ವರೆಗೆ ವಿವರಿಸಿದಂತೆ ಶುಭಯೋಗಗಳಿದ್ದರೆ ೫ ಗುಣಗಳನ್ನು ಕೂಡಿಸಬೇಕು. ಅಶುಭ ಯೋಗಗಳಿದ್ದರೆ ೫ ಗುಣಗಳನ್ನು ಕಳೆಯಬೇಕು. ಹೇಗೆ ೧೦ ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟುಗುಣಗಳು ಲಭಿಸಬಹುದೆಂಬುದನ್ನು ನೋಡುವಾ. ಗುರು-ಶುಕ್ರರ ನವಪಂಚಮ ಶುಭಯೋಗದಿಂದಾಗಿ ೫ಗುಣಗಳನ್ನು ಕೂಡಿಸ ಬೇಕು. ಶನಿ-ಮಂಗಳರ ಗ್ರಹಯೋಗವಿದೆ. ಆದರೆ ಲಾಭಸ್ಥಾನದಲ್ಲಿರುವ ದರಿಂದ ೫ ಗುಣ ಕಳೆಯಬಾರದು. ಹೀಗೆ ೧೦ ಗುಣಗಳಲ್ಲಿ ೫ ಗುಣ ಲಭಿಸು ತ್ತದೆ.

## ೧೧) ಕುಂಡಲೀವರ್ಗೀಕರಣದಲ್ಲಿ ಯಾವ ವರ್ಗದ್ದು ?

ಹನ್ನೊಂದನೇಯ ಅಧ್ಯಾಯದ ೧೨೨ನೇ ಪುಟದಲ್ಲಿ ವಿವರಿಸಿದಂತೆ ಮೇಲಿನ ಮಾದರಿ ೩ನೇ ಜಾತಕವು ಯಾವ ವರ್ಗದಲ್ಲಿ ಬರುತ್ತದೆಂಬುದನ್ನು ಪರಿಶೀಲಿಸುವಾ.

೧) ಆರೋಗ್ಯ ಹಾಗೂ ಆಯುರ್ಮಾನಕ್ಕೆ ಮೀಸಲಾದ ೧೦ ಗುಣಗಳಲ್ಲಿ ಪಡೆದ ಗುಣಗಳು, ೫

೨) ಮಾತೃಸೌಖ್ಯಕ್ಕೆ ಮೀಸಲಾದ ೧೫ಗುಣಗಳಲ್ಲಿ ಪಡೆದ ಗುಣಗಳು 7½

೩) ಪತಿ ಹಾಗೂ ಪತ್ನೀಸೌಖ್ಯಕ್ಕೆ ಮೀಸಲಾದ ೧೫ ಗುಣಗಳಲ್ಲಿ ಪಡೆದ ಗುಣಗಳು ೯

೪) ಆರ್ಥಿಕ ಸ್ಥಿತಿಯ ಬಗೆಗೆ ಮೀಸಲಾದ ೧೦ ಗುಣಗಳಲ್ಲಿ ಪಡೆದ ಗುಣಗಳು 7½

೫) ಶಿಕ್ಷಣಕ್ಕೆ ಮೀಸಲಾದ ೮ ಗುಣಗಳಲ್ಲಿ ಪಡೆದ ಗುಣಗಳು 5½

೬) ಉದ್ಯೋಗಕ್ಕೆ ಮೀಸಲಾದ ೮ ಗುಣಗಳಲ್ಲಿ ಪಡೆದ ಗುಣಗಳು ೫

೭) ಸಂತಾನ (ಸಂತತೀಸೌಖ್ಯ) ಕ್ಕೆ ಮೀಸಲಾದ ೮ ಗುಣಗಳಲ್ಲಿ ಪಡೆದ ಗುಣಗಳು ೮

೮) ಭಾಗ್ಯಕ್ಕೆ ಮೀಸಲಾದ ೮ ಗುಣಗಳಲ್ಲಿ ಪಡೆದ ಗುಣಗಳು ೪

೯) ಶತ್ರು–ಮಿತ್ರ, ಸಹೋದರ– ಸಹೋದರಿಯರ ಸೌಖ್ಯಕ್ಕಾಗಿ ಮೀಸಲಾದ ೮ ಗುಣಗಳಲ್ಲಿ ಪಡೆದ ಗುಣಗಳು ೪

೧೦) ಶುಭಾ– ಅಶುಭಯೋಗಗಳಿಗೆ ಮೀಸಲಾದ ೧೦ ಗುಣಗಳಲ್ಲಿ ಪಡೆದ ಗುಣಗಳು ೫

ಒಟ್ಟು ಗುಣಗಳು ೧೦೦ ಗುಣಗಳಲ್ಲಿ 60½ ಗುಣಗಳು ಈ ಜಾತಕಕ್ಕೆ ಲಭಿಸಿವೆ. ಆದುದರಿಂದ ಈ ಜಾತಕವು ಬಿ. ಗ್ರೇಡದ್ದು ಇರುತ್ತದೆ.

## ಮಾದರಿ ೪

ದಿನಾಂಕ ೩–೩–೧೯೨೭ ನೇ ಇಸ್ವಿ ಮಧ್ಯಾಹ್ನ ೧೨ ಘಂಟೆಗೆ ವೃಷಭಲಗ್ನ ಕುಂಭರಾಶಿ ಶತತಾರ ನಕ್ಷತ್ರದಲ್ಲಿ ಜನಿಸಿದ ಈ ಜಾತಕತನ್ನು ನೋಡಿರಿ.

ಲಗ್ನಕುಂಡಲಿ




ಈ ಜಾತಕವನ್ನು ಒಮ್ಮೆ ವಿಹಂಗಮನೋಟ ನೋಡಿರಿ. ವೃಷಭ ಲಗ್ನದ ಲಗ್ನದಲ್ಲಿ ಕುಜನಿದ್ದಾನೆ. ಸಪ್ತಮಸ್ಥಾನದಲ್ಲಿ ಶನಿಯಿದ್ದು ಕುಜನೊಂದಿಗೆ ಅಂಶಾತ್ಮಕ ಪ್ರತಿಯೋಗಮಾಡುತ್ತಿದ್ದಾನೆ. ಗುರು, ಚಂದ್ರ, ರವಿಯರು ದಶಮದಲ್ಲಿದ್ದಾರೆ. ಅದರಲ್ಲಿಯೂ ಗುರು – ಚಂದ್ರರ ಯುತಿ ಯೋಗವಿದೆ. ಬುಧ, ಶುಕ್ರರು ಲಾಭದಲ್ಲಿದ್ದಾರೆ ಬುಧನು ನೀಚರಾಶಿಯುವನಾಗಿದ್ದರೂ ಉಚ್ಚರಾಶಿಯ ಶುಕ್ರನೊಂದಿಗಿದ್ದಾನೆ. ಆದ್ದರಿಂದ ಬುಧನ ನೀಚತ್ವಭಂಗವಾಗಿದೆ. ಉತ್ಕರಾಶಿಯ ರಾಹು, ಕೇತುಗಳು ಕ್ರಮಶಃ ದ್ವಿತೀಯ ಅಷ್ಟಮದಲ್ಲಿದ್ದಾರೆ. ಇದು ಈ ಜಾತಕದ ವಿಹಂಗಮನೋಟವಾಯಿತು. ಇನ್ನು ಈ ಗ್ರಂಥದಲ್ಲಿ ವಿವರಿಸಿದಂತೆ ಈ ಜಾತಕವನ್ನು ದಶಮ ದೃಷ್ಟಿಕೋನಗಳಿಂದ ಮೌಲ್ಯ ಮಾಪನವಮಾಡುವಾ.

## ೧) ಆರೋಗ್ಯ ಹಾಗೂ ಆಯುರ್ಮಾನಕ್ಕೆ ಪಡೆದ ಗುಣಗಳು :

ಆರೋಗ್ಯ ಹಾಗೂ ಆಯುರ್ಮಾನ ದೃಷ್ಟಿಯಿಂದ ಮಾದರೀ ೪ನೇ ಜಾತಕವು ಎಷ್ಟು ಗುಣಗಳು ಬರಬಹುದೆಂಬುದನ್ನು ತಿಳಿದುಕೊಳ್ಳಲು ಈ ಗ್ರಂಥದ ಒಂದನೇ ಅಧ್ಯಾಯದ ೭ನೇ ಪುಟದಿಂದ ೧೭ನೇ ಪುಟದ ವರೆಗೆ ವಿವರಿಸಿದಂತೆ ಯಾರೊಬ್ಬರ ಆರೋಗ್ಯದ ಬಗೆಗೆ ಗುಣಮಾಪನ ಮಾಡುವಾಗ

ಲಗ್ನ ಹಾಗೂ ಲಗ್ನೇಶನ ಬಲಾಬಲಕ್ಕೆ ೨ ಗುಣಗಳು, ಷಷ್ಠಸ್ಥಾನ ಹಾಗೂ ಷಷ್ಠೇಶನ ಬಲಾಬಲಕ್ಕೆ ೨ ಗುಣ. ಅಷ್ಟಮಸ್ಥಾನ ಹಾಗೂ ಅಷ್ಟಮೇಶನ ಬಲಾಬಲಕ್ಕೆ ೨ ಗುಣಗಳು, ಸೂರ್ಯನ ಬಲಾಬಲಕ್ಕೆ ೨ಗುಣಗಳು, ಚಂದ್ರನ ಬಲಾಬಲಕ್ಕೆ ೨ಗುಣಗಳು. ಹೀಗೆ ೧೦ಗುಣಗಳಿದ್ದು ಮೇಲಿನ ೪ನೇ ಮಾದರೀ ಜಾತಕಕ್ಕೆ ಆರೋಗ್ಯದೃಷ್ಟಿಯಿಂದ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದಲ್ಲಿ ಲಗ್ನದಲ್ಲಿ ಅಂದರೆ ತನುಃ ಸ್ಥಾನದಲ್ಲಿ ಶತ್ರುಕ್ಷೇತ್ರಿಯಾದ ಕುಜನು ಶತ್ರುವಿನೊಡನೆ ಅಂಶಾತ್ಮಕ ಪ್ರತಿಯೋಗ ಮಾಡುತ್ತಿದ್ದಾನೆ. ಆದರೆ ಲಗ್ನೇಶನಾದ ಶುಕ್ರನು ಉಚ್ಚರಾಶಿಯವನಾಗಿ ಮಿತ್ರನೊಂದಿಗೆ ಲಾಭದಲ್ಲಿ ವಿರಾಜಮಾನನಾಗಿದ್ದಾನೆ. ಆದುದರಿಂದ ೨ ಗುಣಕ್ಕೆ ೧ ಗುಣ ಲಭಿಸುತ್ತಪೆ.

ಇನ್ನು ಷಷ್ಠದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಆದರೆ ಷಷ್ಠೇಶನಾದ ಶುಕ್ರನು ಉಚ್ಚರಾಶಿಯವನಾದಿ ಲಾಭದಲ್ಲಿದ್ದಾನೆ. ಆದುದರಿಂದ ೨ ಗುಣಕ್ಕೆ ೨ ಗುಣಲಭಿಸುತ್ತಪೆ.

ಇದರಂತೆ ಅಷ್ಟಮದಲ್ಲಿ ಉಚ್ಚರಾಶಿಯ ಕೇತುವಿದ್ದು ಅಷ್ಟಮೇಶನಾದ ಗುರುವು ಸ್ಥಾನಬಲದವನೂ ರಾಶಿಬಲದವನೂ ಆಗಿ, ದಶಮದಲ್ಲಿದ್ದಾನೆ. ಆದುದರಿಂದ ೨ಗುಣಕ್ಕೆ ೨ ಗುಣಲಭಿಸುತ್ತದೆ.

ಇನ್ನು ಸೂರ್ಯಭಗವಾನನು ಸ್ಥಾನಬಲದವನೂ ಯೋಗಕಾರಕನೂ ಇದ್ದಾನೆ. ಆದರೆ ರಾಶಿಬಲದವನಿರುವುದಿಲ್ಲ. ಆದುದರಿಂದ ೨ ಗುಣಕ್ಕೆ ೧ಗುಣ ಲಭಿಸುತ್ತದೆ.

ಇದರಂತೆ ಚಂದ್ರನು ಸ್ಥಾನಬಲದವನೇನೋ ಇದ್ದಾನೆ. ಆದರೆ ರಾಶಿ ಬಲದವನಿಲ್ಲ. ಅಲ್ಲದೇ ಕ್ಷೀಣನಿದ್ದಾನೆ. ಆದುದರಿಂದ ೨ ಗುಣಕ್ಕೆ ೧ ಗುಣ ಲಭಿಸುತ್ತದೆ

ಹೀಗೆ ಆರೋಗ್ಯ ದೃಷ್ಟಿಯಿಂದ ಈ ಜಾತಕಕ್ಕೆ ೧೦ ಗುಣಗಳಲ್ಲಿ ೭ ಗುಣಗಳು ಲಭಿಸಿದಂತಾಗುತ್ತದೆ.

ಇನ್ನು ಲಗ್ನದಲ್ಲಿರುವ ಗ್ರಹ ಹಾಗೂ ಲಗ್ನೇಶನ ಬಲಾಬಲ,ಷಷ್ಠಸ್ಥಾನ ದಲ್ಲಿರುವ ಗ್ರಹ ಹಾಗೂ ಷಷ್ಠೇಶನ ಬಲಾಬಲ ಅಷ್ಟಮ ಸ್ಥಾನದಲ್ಲಿರುವ ಗ್ರಹಗಳ ಬಲಾಬಲ ಹಾಗೂ ಅಷ್ಟಮೇಶನ ಬಲಾಬಲ ಅಲ್ಲದೇ ಸೂರ್ಯನ ಬಲಾಬಲಚಂದ್ರನ ಬಲಾಬಲ ಈ ಎಂಟು ಸಂಗತಿಗಳಲ್ಲಿ ಸಂಗತಿಗಳು ಪೂರಕ ವಿರುವದರಿಂದ ದೀರ್ಘಾಯು ಜಾತಕ ವಿರುತ್ತದೆ.

## ೨) ಮಾತೃಸೌಖ್ಯಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೪ನೇ ಜಾತಕಕ್ಕೆ ಮಾತೃಸೌಖ್ಯ ದೃಷ್ಟಿಯಿಂದ ಎಷ್ಟು ಗುಣಗಳು ಬರಬಹುದೆಂಬುದನ್ನು ಅರಿತುಕೊಳ್ಳಲು ಈ ಗ್ರಂಥದ ೨ನೇಯ ಅಧ್ಯಾಯದ ೧೮ನೇ ಪುಟದಿಂದ ೨೪ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಮಾತೃಸೌಖ್ಯದ ವಿಷಯವಾಗಿ ಚತುರ್ಥಸ್ಥಾನದಲ್ಲಿಯ ಗ್ರಹ ಗಳ ಬಲಾಬಲ ಹಾಗೂ ಚತುರ್ಥೇಶನ ಬಲಾಬಲಕ್ಕೆ ಕೂಡಿ ೪ಗುಣಗಳು. ಬಲಾಢ್ಯ ಚಂದ್ರನಿಗೆ ೪ಗುಣಗಳು. ಬಲಾಢ್ಯಶುಕ್ರನಿಗೆ ೩ಗುಣಗಳು, ಬಲಾಢ್ಯ ಗುರುವಿಗೆ ೨ ಗುಣಗಳು, ಮಾತೃಸೌಖ್ಯದ ಪೋಷಕಯೋಗಗಳಿಗೆ ೨ ಗುಣ ಗಳು ಹೀಗೆ ಮಾತೃಸೌಖ್ಯಕ್ಕೆ ೧೫ ಗುಣಗಳಿದ್ದು ಮೇಲೆ ಬರೆದ ಜಾತಕಕ್ಕೆ ಎಷ್ಟುಗುಣಬೀಳಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದಲ್ಲಿ ಚತುರ್ಥಸ್ಥಾನ ಯಾವುದೇ ಗ್ರಹವಿರುವು ದಿಲ್ಲ. ಆದರೆ ಚತುರ್ಥೇಶನು ಸ್ಥಾನಬಲದವನಿದ್ದರೂ ರಾಶಿಬಲದವನಿರುವು ದಿಲ್ಲ, ಆದರೆ ಚತುರ್ಥಸ್ಥಾನವನ್ನು ತನ್ನ ಸ್ಥಾನವನ್ನು ನೋಡುತ್ತಿದ್ದಾನೆ. ಆದ್ದರಿಂದ ೪ ಗುಣಗಳಲ್ಲಿ ೨ ಗುಣಗಳು ಲಭಿಸುತ್ತದೆ.

ಇನ್ನು ಚಂದ್ರನೂ ಕೂಡ ರಾಶಿಬಲವನಿರದೇ ಸ್ಥಾನಬಲದವನಿದ್ದಾನೆ, ಆದರೆ ಚತುರ್ಥಸ್ಥಾನವನ್ನು ನೋಡುತ್ತಾನೆ. ಆದಾಗ್ಯೂ ಕ್ಷೀಣಚಂದ್ರನಿದ್ದಾನೆ

ಆದರೆ ಗುರುವಿನೊಂದಿಗಿದ್ದಾನೆ. ಆದ್ದರಿಂದ ೪ ಗುಣಕ್ಕೆ ೪ ಗುಣಗಳು ಲಭಿಸುತ್ತವೆ.

ಇನ್ನು ಮಾತೃಸೌಖ್ಯಕೆ ಇನ್ನೊಂದು ಪೋಷಕ ಗ್ರಹವಾದ ಶುಕ್ರನು ರಾಶಿಬಲವವನೂ ಸ್ಥಾನಬಲದವನೂ ಇದ್ದಾನೆ. ಆದ್ದರಿಂದ ೩ ಗುಣಕ್ಕೆ ೩ಗುಣ ಲಭಿಸುತ್ತದೆ.

ಇದರಂತೆ ಮಾತೃಸೌಖ್ಯದ ಮತ್ತೊಂದು ಪೋಷಕ ಗ್ರಹವಾದ ಗುರುವು ರಾಶಿಬಲದವನೂ ಸ್ಥಾನಬಲದವನೂ ಇದ್ದಾನೆ. ಆದ್ದರಿಂದ ೨ ಗುಣಕ್ಕೆ ೨ ಗುಣಗಳು ಬರುತ್ತವೆ.

ಮಾತೃಸೌಖ್ಯದ ಪೋಷಕಯೋಗಗಳಲ್ಲಿ ಒಂದಾದ ಗುರು– ಚಂದ್ರರ ಯುತಿ ದಶಮದಲ್ಲಿದ್ದು ಚತುರ್ಥಸ್ಥಾನವನ್ನು ನೋಡುತ್ತಾನೆ. ಆದ್ದರಿಂದ ೭ ಗುಣಗಗಳಿಗೆ ೨ ಗುಣಗಳು ಬರುತ್ತವೆ. ಒಟ್ಟಿನಲ್ಲಿ ೧೫ ಗುಣಗಳಲ್ಲಿ ೧೩ ಗುಣಗಳು ಬಂದಂತಾಗಿದೆ.

**೩) ಪತಿ ಹಾಗೂ ಪತ್ನೀಸೌಖ್ಯಕ್ಕೆ ಪಡೆದ ಗುಣಗಳು :**

ಮೇಲೆ ಬರೆದ ೪ನೇ ಜಾತಕಕ್ಕೆ ಪತಿಸೌಖ್ಯದ ದೃಷ್ಟಿಯಿಂದ (ಇದು ಮಹಿಳೆಯ ಜಾತಕ ಇರುತ್ತದೆ) ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ತಿಳಿಯಲು ಈ ಗ್ರಂಥದ ಮೂರನೇ ಅಧ್ಯಾಯದ ೨೫ ನೇ ಪುಟದಿಂದ ೩೧ನೇ ಪುಟದವರೆಗೆ ವಿವರಿಸಿದಂತೆ ಪತೀಸೌಖ್ಯಕ್ಕೆ ೧೫ ಗುಣಗಳಿದ್ದು ಅವುಗಳಲ್ಲಿ ಸಪ್ತಮಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ಸಪ್ತಮೇಶನ ಬಲಾಬಲಕ್ಕೆ ಕೂಡಿ ೬ಗುಣಗಳು ಶುಕ್ರನ ಬಲಾಬಲಕ್ಕೆ ೪ಗುಣಗಳು ಗುರುವಿನ ಬಲಾಬಲಕ್ಕೆ ೩ ಗುಣಗಳು ಪತ್ನಿಸೌಖ್ಯ ಶುಭಯೋಗಗಳಿಗೆ ೨ ಗುಣಗಳು ಹೀಗೆ ೧೫ ಗುಣಗಳಿದ್ದು, ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಬರಬಹುದೆಂಬುದನ್ನು ನೋಡುವಾ.

ಇನ್ನು ಮೇಲೆ ಬರೆದ ಮಾದರೀ ೪ನೇ ಜಾತಕದ ಸಪ್ತಮದಲ್ಲಿ ಶತ್ರು ಕ್ಷೇತ್ರಿ ಶನಿ ಇದ್ದಾನೆ. ಅಲ್ಲದೇ ಸಪ್ತಮೇಶನಾದ ಕುಜನು ಕೂಡ ಶತ್ರುಕ್ಷೇತ್ರಿ

ಯಾಗಿ ಲಗ್ನದಲ್ಲಿದ್ದು ತನ್ನಸ್ಥಾನವನ್ನು ನೋಡುತ್ತಿದ್ದರೆ ಶತ್ರುವಿನೊಂದಿಗೆ ಅಂಶಾತ್ಮಕ ಪ್ರತಿಯೋಗ ಮಾಡುತ್ತಾನೆ. ಇದು ಪತಿ – ಪತ್ನೀ ಸೌಖ್ಯಕ್ಕೆ ಮಾರಕವು ಆದ್ದರಿಂದ ೭ ಗುಣಕ್ಕೆ ಶೂನ್ಯ ಗುಣಲಭಿಸುತ್ತದೆ.

ಇನ್ನು ಪತಿ–ಪತ್ನಿಸೌಖ್ಯದ ನೈಸರ್ಗಿಕ ಪೋಷಕ ಗ್ರಹವಾದ ಶುಕ್ರನು ಸ್ಥಾನಬಲದವನೂ ರಾಶಿಬಲದವನೂ ಇದ್ದಾನೆ. ಆದ್ದರಿಂದ ೯ ಗುಣಕ್ಕೆ ೪ ಗುಣಲಭಿಸುತ್ತವೆ.

ಇದರಂತೆ ಪತಿ,ಸೌಖ್ಯಕ್ಕೆ ಮತ್ತೊಂದು ಪೋಷಕ ಗ್ರಹವಾದ ಗುರುವು ರಾಶಿಬಲದವನೂ ಸ್ಥಾನಬಲದವನೂ ಇದ್ದಾನೆ. ಆದರೆ ಸಪ್ತಮಸ್ಥಾನ ನೋಡುವುದಿಲ್ಲವಾದುದರಿಂದ ೬ ಗುಣಕ್ಕೆ 1½ ಗುಣಲಭಿಸುತ್ತದೆ.

ಇನ್ನು ಶನಿ–ಮಂಗಳರ ಅಂಶಾತ್ಮಕ ಪ್ರತಿಯೋಗ ಲಗ್ನ ಸಪ್ತಮ ದಲ್ಲಿರುವುದು ಪತಿ, ಪತ್ನಿಸೌಖ್ಯಕ್ಕೆ ಅತ್ಯಂತ ಮಾರಕಯೋಗವು. ಆದ್ದರಿಂದ ೨ಗುಣಕ್ಕೆ ಶೂನ್ಯಗುಣ ಬರುತ್ತದೆ. ಹೀಗಾಗಿ ಪತಿಸೌಖ್ಯಕ್ಕೆ ಮೀಸಲಾದ ೧೫ ಗುಣಗಳಲ್ಲಿ ಕೇವಲ 5½ ಗುಣಗಳು ಲಭಿಸುತ್ತವೆ.

## ೪) ಆರ್ಥಿಕಸ್ಥಿತಿಯ ಬಗೆಗೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೪ನೇ ಜಾತಕಕ್ಕೆ ಆರ್ಥಿಕದೃಷ್ಟಿಯಿಂದ ಎಷ್ಟು ಗುಣಗಳು ಬರಬಹುದೆಂಬುದನ್ನು ಕಂಡುಕೊಳ್ಳಲು ಈ ಗ್ರಂಥದ ೯ನೇ ಅದ್ಯಾಯದ ೩೨ನೇ ಪುಟದಿಂದ ೫೦ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಆರ್ಥಿಕ ಸ್ಥಿತಿಯ ಬಗೆಗೆ ಗುಣಮಾಪನ ಮಾಡುವಾಗ ಪಿತ್ರಾರ್ಜಿತ ಸೌಖ್ಯಕ್ಕೆ ೩ಗುಣಗಳನ್ನು ಸ್ವಅರ್ಜಿತಕ್ಕಾಗಿ ೪ ಗುಣಗಳು. ಆಕಸ್ಮಿಕಧನಯೋಗಕ್ಕಾಗಿ ೩ ಗುಣಗಳು ಹೀಗೆ ೧೦ ಗುಣಗಳಿದ್ದು, ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದ ದ್ವಿತೀಯಾಧಿಪತಿಯಾದ ಬುಧನು ನೀಚರಾಶಿ ಯುವನಾಗಿದ್ದರೂ ನೀಚಭಂಗವಾಗಿದ್ದರಿಂದ ಬಲಾಢ್ಯ ಮಿತ್ರನೊಂದಿಗೆ ಲಾಭ

ಸ್ಥಾನದಲ್ಲಿದ್ದಾನೆ. ಆದ್ದರಿಂದ ೧ ಗುಣಕ್ಕೆ ೦ ಗುಣ ಲಭಿಸುತ್ತದೆ. ಇನ್ನು ಚತುರ್ಥಾಧಿಪತಿಯು ಶತ್ರುಕ್ಷೇತ್ರಿ ಇದ್ದರೂ ಸ್ಥಾನಬಲದವನಿದ್ದು ತನ್ನ ಚತುರ್ಥ ಸ್ಥಾನವನ್ನು ನೋಡುತ್ತಾನೆ. ಆದ್ದರಿಂದ ೧ ಗುಣಕ್ಕೆ $\frac{1}{2}$ ಗುಣ ಲಭಿಸುತ್ತದೆ. ಇದರಂತೆ ದಶಮಾಧಿಪತಿಯು ಶತ್ರುಕ್ಷೇತ್ರಿ ಇದ್ದು ದುರ್ಬಲ ನಿದ್ದಾಗ್ಯೂ ದಶಮದಲ್ಲಿ ಬಲಾಢ್ಯ ಗ್ರಹಗಳಿವೆ. ಆದ್ದರಿಂದ ೧ ಗುಣಕ್ಕೆ $\frac{1}{2}$ ಗುಣ ಲಭಿಸುತ್ತದೆ. ಹೀಗಾಗಿ ಪಿತ್ರಾರ್ಜಿತ ಸೌಖ್ಯದ ೩ ಗುಣಗಳಲ್ಲಿ ೨ ಗುಣಗಳು ಬಂದಂತಾಗಿದೆ.

ಇನ್ನು ಮೇಲಿನ ಜಾತಕಕ್ಕೆ ಸ್ವಆರ್ಜಿತಕ್ಕಾಗಿ ಮೀಸಲಾದ ೪ಗುಣಗಳಲ್ಲಿ ಎಷ್ಟು ಗುಣಗಳು ಬರಬಹುದೆಂಬುದನ್ನು ನೋಡುವಾ. ಇದು ವೃಷಭಲಗ್ನದ ಜಾತಕವಿದ್ದು ಈ ಲಗ್ನಕ್ಕೆ ಸ್ವಆರ್ಜಿತಕ್ಕಾಗಿ ಶನಿ,ಬುಧ, ರವಿ ಈ ಗ್ರಹಗಳ ಬಲಾಬಲದ ಮೇಲೆ ಅವರುಗಳಿಸುವ ಸಾಮರ್ಥ್ಯ ತಿಳಿಯುತ್ತದೆ. ಮೇಲಿನ ಜಾತಕಕ್ಕೆ ಶನಿಯು ಸ್ಥಾನಬಲದವನೆನೋ ಇದ್ದಾನೆ. ಆದರೆ ರಾಶಿ ಬಲದವ ಇಲ್ಲಾ ಇಷ್ಟೆ ಅಲ್ಲಾ ಮಂಗಳನೊಂದಿಗೆ ಪ್ರತಿಯೋಗ ಮಾಡುತ್ತಾನೆ. ಆದ್ದರಿಂದ ೨ ಗುಣಕ್ಕೆ ೧ ಗುಣಮಾತ್ರ ಲಭಿಸುತ್ತದೆ. ಇನ್ನು ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇರುವನು. ಅದಕ್ಕಾಗಿ ೧ ಗುಣಕ್ಕೆ ೧ಗುಣ ಲಭಿಸುತ್ತದೆ. ಇನ್ನು ಸೂರ್ಯನು ಸ್ಥಾನಬಲದವನಿದ್ದು ರಾಶಿ ಬಲದವ ನಿರುವದಿಲ್ಲ. ಅದಕ್ಕಾಗಿ ೧ಗುಣಕ್ಕೆ $\frac{1}{2}$ಗುಣ ಲಭಿಸುತ್ತದೆ. ಹೀಗೆ ಸ್ವಆರ್ಜಿತದ ೪ ಗುಣಗಳಲ್ಲಿ 2$\frac{1}{2}$ ಗುಣ ಲಭಿಸುತ್ತದೆ.

ಇದರಂತೆ ಮೇಲಿನ ಜಾತಕ ಆಕಸ್ಮಿಕ ಧನ ಪ್ರಾಪ್ತಿಗಾಗಿ ಎಷ್ಟು ಗುಣ ಲಭಿಸಬಹುದೆಂಬುದನ್ನು ನೋಡುವಾ. ಮೇಲಿನ ಜಾತಕದ ಅಷ್ಟಮದಲ್ಲಿ ಉಚ್ಚರಾಶಿಯು ಕೇತು ಗ್ರಹವಿದ್ದಾನೆ. ಅಲ್ಲದೇ ಅಷ್ಟಮೇಶನು ರಾಶಿಬಲ ದವನೂ ಸ್ಥಾನಬಲದವನೂ ಇದ್ದಾನೆ.ಆದ್ದರಿಂದ ೧ಗುಣಕ್ಕೆ ೧ಗುಣ ಲಭಿಸು ತ್ತದೆ. ಇನ್ನು ಪಂಚಮೇಶನಾದ ಬುಧನು ಲಾಭದಲ್ಲಿದ್ದಾನೆ. ಇಷ್ಟೇ ಅಲ್ಲಾ ಬಲಾಢ್ಯ ಲಗ್ನೇಶನೊಂದಿಗಿದ್ದಾನೆ. ಆದ್ದರಿಂದ ೧ ಗುಣಕ್ಕೆ ೧ ಗುಣಲಭಿಸು ತ್ತದೆ. ಇನ್ನು ಆಕಸ್ಮಿಕಧನ ಪ್ರಾಪ್ತಿಯು ಶುಭಯೋಗಗಳಾದ ಬುಧ, ಶುಕ್ರರ

ಯೋಗವು ಲಾಭದಲ್ಲಿ ಗುರು ಚಂದ್ರರ ಶುಭಯೋಗವು ದಶಮದಲ್ಲಿ ಆದ್ದರಿಂದ ೧ ಗುಣಕ್ಕೆ ೧ ಗುಣಲಭಿಸದೆ. ಹೀಗಾಗಿ ಆಕಸ್ಮಿಕ ಧನಪ್ರಾಪ್ತಿಗಾಗಿ ಇರುವ ೩ ಗುಣಗಳಲ್ಲಿ ೩ ಗುಣಲಭಿಸಿದಂತಾಯಿತು. ಒಟ್ಟಿನಲ್ಲಿ ಇವರ ಆರ್ಥಿಕ ಸ್ಥಿತಿಯ ಬಗೆಗೆ ವಿಂಸಲಾದ ೧೦ಗುಣಗಳಲ್ಲಿ 7½ಗುಣಗಳು ಲಭಿಸಿದಂತಾಗಿದೆ.

## ೫) ಶಿಕ್ಷಣಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ನಾಲ್ಕನೇಜಾತಕಕ್ಕೆ ಶಿಕ್ಷಣದೃಷ್ಟಿಯಿಂದ ಎಷ್ಟು ಗುಣಗಳು ಲಭಿಸಿವೆ ಎಂಬುದನ್ನು ಅರಿತು ಕೊಳ್ಳಲು ಇದೇ ಗ್ರಂಥದ ಐದನೇ ಅಧ್ಯಾಯದ ೫೧ ನೇ ಪುಟದಿಂದ ೫೮ ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಶಿಕ್ಷಣದ ಬಗೆಗೆ ಗುಣಮಾಪನ ಮಾಡುವಾಗ ಗುರುವಿನ ಬಲಾಬಲಕ್ಕೆ ೨ ಗುಣಗಳು, ಬುಧನ ಬಲಾಬಲಕ್ಕೆ ೨ ಗುಣಗಳು, ಪಂಚಮಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ಪಂಚಮೇಶನ ಬಲಾಬಲಕ್ಕೆ ೨ಗುಣಗಳು, ತೃತಿಯಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ತೃತೀಯೇಶನ ಬಲಾಬಲಕ್ಕೆ ೨ ಗುಣಗಳು. ಹೀಗೆ ೮ ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಬರಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದಲ್ಲಿ ಗುರುವು ಸ್ಥಾನಬಲದವನೂ, ರಾಶಿ ಬಲದವನೂ ಇರುವುದರಿಂದ ೨ ಗುಣಕ್ಕೆ ೨ ಗುಣಗಳು ಲಭಿಸುತ್ತವೆ.

ಇನ್ನು ಇವರ ಜಾತಕದಲ್ಲಿ ಬುಧನು ನೀಚ ರಾಶಿಯಲ್ಲಿದ್ದರೂ, ಉಚ್ಚ ರಾಶಿಯಲ್ಲಿದ್ದ ಶುಕ್ರನೊಂದಿಗೆ ಇರುವುದರಿಂದ ನೀಚತ್ವ ಭಂಗವಾಗಿದೆ. ಅಲ್ಲದೇ ತನ್ನ ಸ್ಥಾನವಾದ ಪಂಚಮ ಸ್ಥಾನವನ್ನು ಈಕ್ಷಿಸುತ್ತಿದ್ದಾನೆ. ಅದುದರಿಂದ ೨ ಗುಣಕ್ಕೆ ೨ ಗುಣ ಲಭಿಸಿದಂತಾಗಿದೆ.

ಇನ್ನು ಪಂಚಮಾಧೀಶನೂ ಬಲಾಢ್ಯನಿದ್ದು, ಪಂಚಮ ಸ್ಥಾನವನ್ನು ನೋಡುತ್ತಾನೆ. ಹಾಗೂ ಪಂಚಮದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಆದುದರಿಂದ ೨ ಗುಣಕ್ಕೆ ೨ ಗುಣ ಲಭಿಸುತ್ತವೆ.

ಇದರಂತೆ ತೃತೀಯ ಸ್ಥಾನದಲ್ಲಿ ಯಾವುದೇ ಗ್ರಹವಿಲ್ಲ. ಆದರೆ ತೃತೀಯಾಧೀಶನಾದ ಚಂದ್ರನು ಗುರುವಿನೊಂದಿಗಿದ್ದಾನೆ. ಆದ್ದರಿಂದ ೨ ಗುಣಕ್ಕೆ ೨ ಗುಣಗಳು ಲಭಿಸುತ್ತವೆ.

ಹೀಗೆ ಶಿಕ್ಷಣ ದೃಷ್ಟಿಯಿಂದ ಈ ಜಾತಕಕ್ಕೆ ೮ ಗುಣಗಳಿಗೆ ೮ ಗುಣಗಳು ಲಭಿಸಿವೆ. ಆದ್ದರಿಂದ ಇವರು ಶಿಕ್ಷಣ ದೃಷ್ಟಿಯಿಂದ ಸುದೈವಿಗಳಾಗಿರುವದರಿಂದಲೇ ಸ್ನಾತಕೋತ್ತರ ಶಿಕ್ಷಣ ಪಡೆದಿರುವುದಲ್ಲದೇ, ಸಂಶೋಧನೆ ಮಾಡಿ ಡಾಕ್ಟರೇಟ ಸಹ ಪಡೆದಿದ್ದಾರೆ. ಅಲ್ಲದೇ ಲೇಖಕೀಯರು, ಭಾಷಣಕಾರರು ಇದ್ದಾರೆ.

## ೬) ಉದ್ಯೋಗಕ್ಕೆ ಪಡೆದ ಗುಣಗಳು :

ಮೇಲೆ ಬರೆದ ಮಾದರೀ ೪ನೇ ಜಾತಕಕ್ಕೆ ಉದ್ಯೋಗದೃಷ್ಟಿಯಿಂದ ಎಷ್ಟು ಗುಣಗಳು ಬರಬಹುದೆಂಬುದನ್ನು ತಿಳಿದುಕೊಳ್ಳಲು ಇದೇ ಗ್ರಂಥದ ಆರನೇಯ ಅಧ್ಯಾಯದ ೫೯ನೇ ಪುಟದಿಂದ ೬೬ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಉದ್ಯೋಗದ ಬಗೆಗೆ ಗುಣವಾಪನಮಾಡುವಾಗ ದಶಮ ಸ್ಥಾನದಲ್ಲಿಯ ಗ್ರಹ ಹಾಗೂ ದಶಮೇಶನ ಬಲಾಬಲಕ್ಕೆ ೩ ಗುಣಗಳನ್ನು, ಲಗ್ನದಲ್ಲಿಯಗ್ರಹ ಹಾಗೂ ಲಗ್ನೇಶನ ಬಲಾಬಲಕ್ಕೆ ೧ ಗುಣವನ್ನು, ಪಂಚಮದಲ್ಲಿಯ ಗ್ರಹ ಹಾಗೂ ಪಂಚಮೇಶನ ಬಲಾಬಲಕ್ಕೆ ೧ ಗುಣವು, ದ್ವಿತೀಯ ಸ್ಥಾನದಲ್ಲಿಯ ಗ್ರಹ ಹಾಗೂ ದ್ವಿತೀಯೇಶನ ಬಲಾಬಲಕ್ಕೆ ೧ಗುಣ, ಹಾಗೂ ತೃತೀಯಸ್ಥಾನದಲ್ಲಿಯ ಗ್ರಹ ಹಾಗೂ ತೃತೀಯೇಶನ ಬಲಾಬಲಕ್ಕೆ ೧ ಗುಣ ಚತುರ್ಥಸ್ಥಾನದಲ್ಲಿಯ ಗ್ರಹ ಹಾಗೂ ಚತುರ್ಥೇಶನ ಬಲಾಬಲಕ್ಕೆ ೧ ಗುಣ ಹೀಗೆ ಆರು ಸಂಗತಿಗಳಿಗೆ ೮ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಲಭಿಸಿವೆ ಎಂಬುದನ್ನು ನೋಡುವಾ.

ಇವರ ಜಾತಕದ ದಶಮದಲ್ಲಿ ರವಿ, ಗುರು, ಚಂದ್ರರಿದ್ದರೆ ಆದರಲ್ಲಿಯೂ ಗುರು-ಚಂದ್ರರ ಯುತಿಯೋಗದಿಂದ ಗುರುವಿನ ಗುಣ ಧರ್ಮದಂತೆ ಇವರು ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಆದರೆ ದಶಮೇಶನು ಶತ್ರುಕ್ಷೇತ್ರೀ ಇದ್ದು, ಶತ್ರುವಿನೊಂದಿಗೆ ಪ್ರತಿಯೋಗ ಮಾಡು

ತ್ತಿರುವುದರಿಂದ ಅಧ್ಯಾಪಕ ವೃತ್ತಿಗೆ ಶರಣು ಹೊಡೆದು ರವಿಯ ಗುಣ ಧರ್ಮದ ವೃತ್ತಿಯಾದ ರಾಜಕೀಯ ಪ್ರವೇಶಿಸಿ, ಸ್ಥಾನಮಾನ ಅಧಿಕಾರ ಪಡೆದಿದ್ದಾರೆ. ಅದೇನೆ ಇರಲಿ ಶಾಸ್ತ್ರದ ಪ್ರಕಾರ ೩ ಗುಣಕ್ಕೆ $1\frac{1}{2}$ ಗುಣ ಲಭಿಸಿದೆ.

ಇನ್ನು ಲಗ್ನದಲ್ಲಿ ಶತ್ರುಕ್ಷೇತ್ರೀ ಹಾಗೂ ಶತ್ರುವಿನೊಂದಿಗೆ ಪ್ರತಿ ಯೋಗ ಮಾಡುತ್ತಿರುವ ಕುಜನಿದ್ದಾನೆ. ಆದರೆ ಲಗ್ನೇಶನು ಬಲಾಢ್ಯ ನಿದ್ದಾನೆ. ಆದ್ದರಿಂದ ೧ ಗುಣಕ್ಕೆ $\frac{1}{2}$ ಗುಣ ಲಭಿಸುತ್ತದೆ. ಇನ್ನು ಪಂಚಮ ದಲ್ಲಿ ಯಾವುದೇ ಗ್ರಹವಿಲ್ಲದೇ ಪಂಚಮೇಶನು ಬಲಾಢ್ಯನಿದ್ದಾನೆ. ಆದ್ದರಿಂದ ೧ ಗುಣಕ್ಕೆ ೧ ಗುಣಲಭಿಸುತ್ತದೆ. ಇದರಂತೆ ದ್ವಿತಿಯೇಶನು ಸಹ ಲಾಭ ದಲ್ಲಿ ಬಲಾಢ್ಯನಿದ್ದಾನೆ. ಹಾಗೂ ದ್ವಿತೀಯದಲ್ಲಿ ಉಚ್ಚರಾಶಿಯ ರಾಹು ಇದ್ದಾನೆ. ಆದ್ದರಿಂದ ೧ ಗುಣಕ್ಕೆ ೧ ಗುಣ ಲಭಿಸುತ್ತದೆ. ಚತುರ್ಥದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಆದರೆ ಚತುರ್ಥೇಶನು ಬಲಾಢ್ಯನಾಗಿ ದಶಮದಲ್ಲಿದ್ದು ಚತುರ್ಥ ನೋಡುತ್ತಾನೆ. ಆದ್ದರಿಂದ ೧ ಗುಣಕ್ಕೆ ೧ ಗುಣ ದೊರೆತಿದೆ. ಇನ್ನು ತೃತೀಯದಲ್ಲಿ ಯಾವುದೇ ಗ್ರಹವಿಲ್ಲ. ತೃತಿಯೇಶನಾದ ಚಂದ್ರನು ಗುರುವಿನೊಂದಿಗಿದ್ದಾನೆ. ಆದ್ದರಿಂದ ೧ ಗುಣಕ್ಕೆ ೧ ಗುಣ ಲಭಿಸಿದೆ. ಹೀಗೆ ಉದ್ಯೋಗಕ್ಕೆ ಮೀಸಲಾದ ೮ ಗುಣಗಳಲ್ಲಿ ೬ ಗುಣಗಳು ಲಭಿಸಿದಂತಾಗಿದೆ.

## ೭) ಸಂತಾನ (ಸೌಖ್ಯ) ಕ್ಕೆ ಪಡೆದ ಗುಣಗಳು ;

ಮೇಲೆ ಬರೆದ ಮಾದರಿ ೪ನೇ ಜಾತಕಕ್ಕೆ ಸಂತಾನ ಸೌಖ್ಯದೃಷ್ಟಿಯಿಂದ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ತಿಳಿಯಲು ಇದೇ ಗ್ರಂಥದ ಏಳನೇ ಅಧ್ಯಾಯದ ೬೭ನೇ ಪುಟದಿಂದ ೭೩ನೇ ಪುಟದವರೆಗೆ ವಿವರಿಸಿದಂತೆ ಯಾರೊಬ್ಬರ ಸಂತಾನ ಸೌಖ್ಯದ ಗುಣಮಾಪನ ಮಾಡುವಾಗ ಪಂಚಮ ಸ್ಥಾನದಲ್ಲಿಯ ಗ್ರಹಗಳ ಬಲಾಬಲ ಹಾಗೂ ಪಂಚಮೇಶನ ಬಲಾಬಲಕ್ಕೆ ೩ ಗುಣಗಳು, ಗುರುವಿನ ಬಲಾಬಲಕ್ಕೆ ೩ ಗುಣಗಳು ಹಾಗೂ ಸಂತತೀ ಸೌಖ್ಯದ ಶುಭಯೋಗಗಳಿಗೆ ೨ ಗುಣಗಳು ಹೀಗೆ ೮ ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕದಲ್ಲಿ ಪಂಚಮದಲ್ಲಿ ಯಾವುದೇ ಗ್ರಹವಿರುವುದಿಲ್ಲ ಆದರೆ ಪಂಚಮೇಶನು ನೀಚರಾಶಿ ಯೋಗ ಭಂಗದಿಂದಾಗಿ ಬಲಾಢ್ಯನಿರುವು ದಲ್ಲದೇ; ಮಿತ್ರನೊಂದಿಗೆ ಪಂಚಮಸ್ಥಾನವನ್ನು ನೋಡುತ್ತಾನೆ. ಆದರೆ ಬುಧನು ಸಂತತೀ ಸೌಖ್ಯಕ್ಕೆ ಅಷ್ಟೊಂದು ಪೋಷಕ ಗ್ರಹವಲ್ಲ. ಆದಾಗ್ಯೂ ರಾಶಿಯ ಸ್ವಾಮಿತ್ವದಿಂದಲೂ ಪಂಚಮ ಸ್ಥಾನವನ್ನು ನೋಡುತ್ತಿರುವುದ ರಿಂದಲೂ ೩ ಗುಣಕ್ಕೆ ೩ ಗುಣಗಳು ಲಭಿಸುತ್ತದೆ.

ಇನ್ನು ಸಂತಾನ ಸೌಖ್ಯದ ಅರ್ಥಾತ್ ಸಂತತೀ ಸೌಖ್ಯದ ಪೋಷಕ ಗ್ರಹವಾದ ಗುರುವು ರಾಶಿಬಲದವನೂ ಸ್ಥಾನಬಲದವನೂ ಇರುವುದರಿಂದ ೩ ಗುಣಕ್ಕೆ ೩ ಗುಣ ಲಭಿಸುತ್ತದೆ.

ಮೇಲಿನ ಜಾತಕಕ್ಕೆ ಸಂತತೀ ಪೋಷಕ ಯೋಗಗಳಿರುವದಿಲ್ಲ ವಾದುದರಿಂದ ೨ ಗುಣಕ್ಕೆ ಶೂನ್ಯ ಗುಣಗಳು ಲಭಿಸಿದೆ. ಒಟ್ಟಿನಲ್ಲಿ ಸಂತತೀ ಸೌಖ್ಯದ ೮ ಗುಣಗಳಲ್ಲಿ ಈ ಮೇಲಿನ ಜಾತಕಕ್ಕೆ ೬ ಗುಣಗಳು ಲಭಿಸಿವೆ.

**೮) ಭಾಗ್ಯಕ್ಕೆ ಪಡೆದ ಗುಣಗಳು :**

ಮೇಲೆ ಬರೆದ ಮಾದರೀ ೪ ನೇ ಜಾತಕವು ಭಾಗ್ಯ ದೃಷ್ಟಿಯಿಂದ ಎಷ್ಟು ಗುಣಗಳನ್ನು ಲಭಿಸಿವೆ ಎಂಬುದನ್ನು ಈ ಗ್ರಂಥದ ಎಂಟನೇಯ ಅಧ್ಯಾಯದ ೭೪ ನೇ ಪುಟದಿಂದ ೮೧ ನೇ ಪುಟದವರೆಗೆ ವಿವರಿಸಿದಂತೆ ಭಾಗ್ಯ ಸ್ಥಾನ ದಲ್ಲಿಯ ಗ್ರಹದ ಬಲಾಬಲಕ್ಕೆ ೨ ಗುಣಗಳು. ಭಾಗ್ಯೇಶನ ಬಲಾಬಲಕ್ಕೆ ೪ ಗುಣಗಳು. ಭಾಗ್ಯಪೋಷಕಯೋಗಗಳಿಗೆ ೨ ಗುಣಗಳು. ಹೀಗೆ ೮ ಗುಣ ಗಳಿದ್ದು ಮೇಲೆ ಬರೆದ ಜಾತಕಕ್ಕೆ ಭಾಗ್ಯ ದೃಷ್ಟಿಯಿಂದ ಎಷ್ಟು ಗುಣಗಳು ಲಭಿಸಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಮಾದರೀ ೪ ನೇ ಜಾತಕದ ಭಾಗ್ಯಸ್ಥಾನದಲ್ಲಿ ಒಂದೂ ಗ್ರಹವಿರುವುದಿಲ್ಲವಾದುದರಿಂದ ೨ ಗುಣಕ್ಕೆ ಶೂನ್ಯ ಗುಣಗಳು ಲಭಿಸುತ್ತವೆ.

ಇನ್ನು ಭಾಗ್ಯೇಶನಾದಶನಿಯು ಶತ್ರುಕ್ಷೇತ್ರೀ ಹಾಗೂ ಶತ್ರುವಿನೊಂದಿಗೆ ಪ್ರತಿಯೋಗ ಮಾಡುತ್ತಾನೆ. ಆದ್ದರಿಂದ ೪ ಗುಣಕ್ಕೆ ಶೂನ್ಯ ಗುಣಗಳು ದೊರೆಯುತ್ತವೆ.

ಇನ್ನು ಲಗ್ನೇಶ-ಪಂಚಮೇಶರ ಶುಭಯೋಗವು ಲಾಭದಲ್ಲಿ ಲಗ್ನೇಶ. ದ್ವಿತಿಯೇಶರು ಲಾಭದಲ್ಲಿ ಗುರು_ಚಂದ್ರರ ಯುತಿಯೋಗ. ಈ ಎಲ್ಲವೂ ಭಾಗ್ಯಪೋಷಕ ಯೋಗಗಳಿರುವುದರಿಂದ ೨ ಗುಣಕ್ಕೆ ೨ ಗುಣ ಲಭಿಸಿದಂತಾಗಿದೆ. ಹೀಗೆ ಭಾಗ್ಯಕ್ಕೆ ನಿರ್ಧರಿಸಿದ ೮ ಗುಣಗಳಲ್ಲಿ ಕೇವಲ ೨ ಗುಣಗಳು ಮಾತ್ರ ಲಭಿಸಿರುವವರಿಂದ ಇವರು ಭಾಗ್ಯವಂತರೇನೂ ಅಲ್ಲ. ಸುದೈವಿಗಳೂ ಅಲ್ಲ. ಹೋರಾಟಮಯ ಜೀವನದ ಜಾತಕವು.

## ೯) ಶತ್ರು-ಮಿತ್ರ, ಸಹೋದರ-ಸಹೋದರಿಯರ ಸೌಖ್ಯದ ವಿಷಯವಾಗಿ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ನಾಲ್ಕನೇ ಜಾತಕದಲ್ಲಿ ಶತ್ರು-ಮಿತ್ರ, ಸಹೋದರ- ಸಹೋದರಿಯರ ಸೌಖ್ಯದ ದೃಷ್ಟಿಯಿಂದ ಎಷ್ಟು ಗುಣಗಳನ್ನು ಪಡೆದಿದ್ದಾರೆ ಎಂಬುದನ್ನು ಅರಿಯಲು ಈ ಗ್ರಂಥದ ಒಂಬತ್ತನೇ ಅಧ್ಯಾಯದ ೯೨ನೇ ಪುಟದಿಂದ ೯೧ನೇ ಪುಟದ ವರೆಗೆ ವಿವರಿಸಿದಂತೆ ತೃತೀಯ ಸ್ಥಾನದಲ್ಲಿಯ ಗ್ರಹ ಹಾಗೂ ತೃತೀಯೇಶನ ಬಲಾಬಲಕ್ಕೆ ೨ ಗುಣಗಳು, ಷಷ್ಠಸ್ಥಾನ ಹಾಗೂ ಷಷ್ಠೇಶನ ಬಲಾಬಲಕ್ಕೆ ೨ ಗುಣಗಳು, ಲಾಭಸ್ಥಾನ ಹಾಗೂ ಲಾಭೇಶನ ಬಲಾಬಲಕ್ಕೆ ೨ ಗುಣಗಳು ಹಾಗೂ ಶತ್ರು-ಮಿತ್ರ, ಸಹೋದರ - ಸಹೋದರಿಯರ ಸೌಖ್ಯದ ಶುಭಯೋಗಗಳಿಗೆ ೨ ಗುಣಗಳು. ಹೀಗೆ ೮ ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳು ಬರಬಹುದೆಂಬುದನ್ನು ನೋಡುವಾ.

ಮೇಲೆ ಬರೆದ ಜಾತಕ ಷಷ್ಠದಲ್ಲಿ ಯಾವುದೇ ಗ್ರಹವಿರುವುದಿಲ್ಲ ಆದರೆ ಷಷ್ಠೇಶನಾದ ಶುಕ್ರನು ಉಚ್ಚರಾಶಿಯವನಾಗಿ ಲಾಭದಲ್ಲಿದ್ದಾನೆ. ಆದ್ದರಿಂದ ೨ಗುಣಕ್ಕೆ ೨ಗುಣಲಭಿಸುತ್ತದ.

ಇನ್ನು ಲಾಭಸ್ಥಾನದಲ್ಲಿ ಉಚ್ಚರಾಶಿಯ ಶುಕ್ರನು ಮಿತ್ರಬುಧನೊಂದಿಗೆ ವಿರಾಜನಾಗಿದ್ದಾನೆ. ಅಲ್ಲದೇ ಲಾಭೇಶನಾದ ಗುರುವು ಸ್ಥಾನಬಲದವನೂ ರಾಶಿ ಬಲದವನೂ ಇದ್ದಾನೆ ಆದ್ದರಿಂದ ೨ಗುಣಕ್ಕೆ ೨ಗುಣಲಭಿಸುತ್ತದೆ.

ಇವರಂತೆ ತೃತೀಯಸ್ಥಾನದಲ್ಲಿ ಯಾವುದೇ ಗ್ರಹವಿರುವುದಿಲ್ಲ. ಆದರೆ ತೃತೀಯೇಶನಾದ ಚಂದ್ರನು ದಶಮದಲ್ಲಿ ಬಲಾಢ್ಯ ಗುರುವಿನೊಂದಿಗೆ ಯುತಿಯೋಗ ಮಾಡುತ್ತಾನೆ ಆದ್ದರಿಂದ ೨ಗುಣಕ್ಕೆ ೨ಗುಣಲಭಿಸುತ್ತವೆ.

ಇನ್ನು ಶತೃ-ಮಿತ್ರ, ಸಹೋದರ-ಸಹೋದರಿಯರ ಸೌಖ್ಯದ ಶುಭ ಯೋಗಗಳೇನೋ ಇವೆ. ಆದರೆ ಒಂದುಹನಿವಿಷ ಚಿತ್ರ ಎಲ್ಲವನ್ನು ನುಂಗಿತಂತೆ ಈ ಶನಿ-ಮಂಗಳರ ಪ್ರತಿಯೋಗವು ಶತ್ರುಮಿತ್ರರ ಸೌಖ್ಯಕ್ಕೆ ತೊಂದರೆ ಬಹಳ. ಆದ್ದರಿಂದ ೩ ಗುಣಕ್ಕೆ ಶೂನ್ಯ ಗುಣಲಭಿಸುತ್ತದೆ. ಒಟ್ಟನಲ್ಲಿ ಸಹೋದರ- ಸಹೋದರಿಯರ ಹಾಗೂ ಶತೃಮಿತ್ರರ ಸೌಖ್ಯಕಕ್ಕಾಗಿ ಇರುವ ೩ಗುಣಗಳಲ್ಲಿ ೦ಗುಣಗಳು ಲಭಿಸಿದಂತಾಯಿತ್ತು.

## ೧೦) ಶುಭ-ಅಶುಭಯೋಗಗಳಿಗಾಗಿ ಪಡೆದ ಗುಣಗಳು :

ಮೇಲೆ ಬರೆದ ಮಾದರಿ ೪ನೇ ಜಾತಕಕ್ಕೆ ಶುಭ – ಅಶುಭಯೋಗಗಳಿಗಾಗಿ ಎಷ್ಟು ಗುಣಗಳನ್ನು ಪಡೆದಿದ್ದಾರೆ ಎಂಬುದನ್ನು ತಿಳಿಯಲು ಇದೇ ಗ್ರಂಥದ ಹತ್ತನೆ ಅಧ್ಯಾಯದ ೯೨ನೇ ಪುಟದಿಂದ ೧೦೧ನೇ ಪುಟದ ವರಗೆ ವಿವರಿಸಿದಂತೆ ಶುಭಯೋಗಗಳಿದ್ದರೆ ೫ಗುಣಗಳನ್ನು ಕೂಡಿಸಬೇಕು. ಅಶುಭ ಯೋಗಗಳಿದ್ದರೆ ೫ ಗುಣಗಳನ್ನು ಕಳೆಯಬೇಕು ಹೀಗೆ ೧೦ ಗುಣಗಳಿದ್ದು ಮೇಲಿನ ಜಾತಕಕ್ಕೆ ಎಷ್ಟು ಗುಣಗಳನ್ನು ಪಡವಿದ್ದಾರೆ ಎಂಬುದನ್ನು ನೋಡುವಾ.

ಮೇಲೆ ಬರೆದ ಮಾದರಿ ೪ನೇ ಜಾತಕದಲ್ಲಿ ಗುರು-ಚಂದ್ರರ ಯುತಿ ಯೋಗ, ಗಜಕೇಸರಿಯೋಗ. ಬುಧ-ಶುಕ್ರರ ಯುತಿಯೋಗಗಳಂಥ ಶುಭ ಯೋಗಗಳಿಗಾಗಿ ೫ಗುಣಗಳನ್ನು ಕೂಡಿಸಬೇಕಾಗಿತ್ತು. ಆದರೆ ಶನಿ-ಮಂಗಳರ ಪ್ರತಿಯೋಗ, ಶನಿ – ರವಿಯರ ಕೇಂದ್ರಯೋಗಗಳಂಥ ಅಶುಭಯೋಗ ಗಳಿರುವ . ಅಲ್ಲದೇ ಎಲ್ಲಕ್ಕಿಂತ ಹೆಚ್ಚು ಅಶುಭಯೋಗಗಳಾದ ಕಾಳಸರ್ಪ ಯೋಗವೂ ಈ ಜಾತಕದಲ್ಲಿದೆ. ಹೇಗೆಂದರೆ ದ್ವಿತೀಯಸ್ಥಾನದಲ್ಲಿ ಮಿಥುನ

ರಾಶಿಯು ರಾಹು ಹಾಗೂ ಅಷ್ಟಮದಲ್ಲಿ ಧನುರಾಶಿಯಲ್ಲಿದ್ದ ಕೇತು ಗ್ರಹಗಳ ಮಧ್ಯದಲ್ಲಿ ರವಿಯಾದಿ ಎಲ್ಲ ಗ್ರಹಗಳು ಇವೆ. ಆದ್ದರಿಂದ ಇದು ಕಾಳಸರ್ಪ ಯೋಗವು ಆದ್ದರಿಂದ ೫ ಗುಣಗಳನ್ನು ಕಳೆಯಬೇಕು. ಹೀಗಾಗಿ ಮೀಸಲಾದ ೧೦ ಗುಣಗಳಲ್ಲಿ ಶೂನ್ಯ ಗುಣಗಳು ದೊರೆಯುತ್ತವೆ.

## ೧೧) ಕುಂಡಲಿ ವರ್ಗೀಕರಣದಲ್ಲಿ ಯಾವ ವರ್ಗದ್ದು ಎಂಬುದನ್ನು ತಿಳಿಯುವಾ :

ಹನ್ನೊಂದನೇ ಅಧ್ಯಾಯದ ೧೦೨ ಪುಟದಲ್ಲಿ ವಿವರಿಸಿದಂತೆ ಮೇಲಿನ ಜಾತಕವು ಯಾವ ವರ್ಗದಲ್ಲಿಬರುತ್ತದೆಂಬುದನ್ನು ಪರಿಶೀಲಿಸುವಾ.

೧) ಆರೋಗ್ಯ ಹಾಗೂ ಆಯುರ್ಮಾನಕ್ಕಾಗಿ ಮೀಸಲಾದ ಗುಣಗಳು ೧೦ ಪಡೆದ ಗುಣಗಳು ೭

೨) ಮಾತೃ ಸೌಖ್ಯಕ್ಕೆ ಮೀಸಲಾದ ಗುಣಗಳು ೧೫ ಪಡೆದ ಗುಣಗಳು ೧೩

೩) ಪತಿ ಹಾಗೂ ಪತ್ನಿಯ ಸೌಖ್ಯಕ್ಕೆ ಮೀಸಲಾದ ಗುಣಗಳು ೧೫ ಪಡೆದ ಗುಣಗಳು 5½

೪) ಆರ್ಥಿಕಸ್ಥಿತಿಯ ಬಗೆಗೆ ಮೀಸಲಾದ ಗುಣಗಳು ೧೦ ಪಡೆದ ಗುಣಗಳು 7½

೫) ಶಿಕ್ಷಣಕ್ಕಾಗಿ ಮೀಸಲಾದ ಗುಣಗಳು ೮ ಪಡೆದ ಗುಣಗಳು ೮

೬) ಉದ್ಯೋಗಕ್ಕಾಗಿ ಮೀಸಲಾದ ಗುಣಗಳು ೮ ಪಡೆದ ಗುಣಗಳು ೬

೭) ಸಂತಾನ ಸೌಖ್ಯಕ್ಕೆ ಮೀಸಲಾದ ಗುಣಗಳು ೮ ಪಡೆದ ಗುಣಗಳು ೬

೮) ಭಾಗ್ಯಕ್ಕೆ ಮೀಸಲಾದ ಗುಣಗಳು ೮ ಪಡೆದ ಗುಣಗಳು ೨

೯) ಶತ್ರು-ಮಿತ್ರ, ಸಹೋದರ-ಸಹೋದರಿಯರ ಸೌಖ್ಯಕ್ಕೆ ಮೀಸಲಾದ ಗುಣಗಳು ೮ ಪಡೆದ ಗುಣಗಳು ೬

೧೦) ಶುಭ – ಅಶುಭ ಯೋಗಗಳಿಗೆ ಮೀಸಲಾದ ಗುಣಗಳು ೧೦ ಪಡೆದ ಗುಣಗಳು ಶೂನ್ಯ

ಒಟ್ಟು ಗುಣಗಳು ೧೦೦ ಪಡೆದ ಗುಣಗಳು ೬೧. ೧೦೦ಕ್ಕೆ ೬೧ ಗುಣಗಳು ಈ ಜಾತಕಕ್ಕೆ ಲಭಿಸಿರುವದರಿಂದ ಈ ಜಾತಕವು. "ಎ ಗ್ರೇಡದ್ದು" ಇರುತ್ತದೆ.



# ೧೩

## ಸುದೈವಿ ವ್ಯಕ್ತಿ ಯಾರು ?

## ಸುದೈವಿ ಜಾತಕ ಹೇಗಿರುತ್ತದೆ ?

ಸುದೈವಿ ವ್ಯಕ್ತಿ ಯಾರು ? ಸುದೈವೀ ಜಾತಕ ಹೇಗಿರುತ್ತದೆ ? ಎಂಬುದನ್ನು ವಿವೇಚಿಸುವಾ. ಇದನ್ನು ವಿವೇಚಿಸುವ ಅಧ್ಯಾಯು ಒಂದು ವಿಶಿಷ್ಟವಾದುದಾಗಿದೆ. ಹಾಗೆ ನೋಡಿದರೆ ಕುಂಡಲಿ ಗುಣಮಾಪನ ಮಾಡುವ ವಿಧಾನ ಕುರಿತು ಬರೆಯುತ್ತಿರುವ "ಕುಂಡಲಿ ಗುಣ ನಿರ್ಣಯು" ದ ಈ ಗ್ರಂಥಕ್ಕೆ ಈ ಅಧ್ಯಾಯುದ ಅವಶ್ಯಕತೆ ಇರುವುದಿಲ್ಲ ಹಾಗೂ ಈ ವಿಷಯದ ಪ್ರಯೋಜನವೂ ಈ ಗ್ರಂಥಕ್ಕೆ! ಪೂರಕವಾಗಲಾರದೆಂಬುದನ್ನು ಬಲ್ಲೆ. ಆದರೆ ಈ ಗ್ರಂಥದ ಕರಡು ಪ್ರತಿಯನ್ನು ಓದಿದ ನನ್ನ ಅನೇಕ ಮಿತ್ರರು ವಿಚಾರಿಸಿದ ಒಂದೇ ಒಂದು ಪ್ರಶ್ನೆಗೆ ಉತ್ತರ ರೂಪವಾಗಿ ಈ ಅಧ್ಯಾಯು ಬರೆಯುತ್ತಿರುವೆ.

ನನ್ನ ಮಿತ್ರರ ಪ್ರಶ್ನೆ ಹೀಗಿದೆ, "ನೀವು ಇಷ್ಟೆಲ್ಲಾ ವಿಧಾನವನ್ನು ಅನುಸರಿಸಿ, ದಶಮ ದೃಷ್ಟಿಕೋನಗಳಿಂದ ಕುಂಡಲೀ ಗುಣ ಮಾಪನ (ಮೌಲ್ಯಮಾಪನ) ಮಾಡುವ ವಿಧಾನವನ್ನು. ಕ್ರಮವನ್ನು ಸೂಚಿಸಿದ್ದೀರಿ. ಹಾಗಾದರೆ ನಿಮ್ಮ ಅಭಿಪ್ರಾಯದಲ್ಲಿ ಹೆಚ್ಚು ಗುಣಗಳನ್ನು ಪಡೆದ "ಎ-೧" ಗ್ರೇಡಿನ ಜಾತಕವುಳ್ಳ ವ್ಯಕ್ತಿಯೇ ಸುದೈವೀ ವ್ಯಕ್ತಿ, ಸುದೈವಿ ಜಾತಕ ಎಂದು ಭಾವಿಸಬಹುದೇ ?" ಅವರ ಈ ಪ್ರಶ್ನೆ ಸಮಂಜಸವೆಂದು ನನಗೆ ಅನಿಸಿ.

ವಿಚಾರ ಮಾಡಲು ಹಚ್ಚಿತು. ಹಾಗೂ ಈ ಅಧ್ಯಾಯ ಬರೆಯಲು ಪ್ರೇರಣೆ ನೀಡಿತು.

ಸುದೈವಿ ವ್ಯಕ್ತಿ ಯಾರು ? ಹೇಗೆ ? ಎಂಬುದರ ವಿವೇಚನೆ ವೇದಾಂತ ಹಾಗೂ ಲೌಕಿಕಗಳದೃಷ್ಟಿಯಿಂದ ವಿಭಿನ್ನವಿರುತ್ತದೆ. ಸುದೈವಿ ಎಂದರೆ ದೈವಾನುಗ್ರಹ ಪಡೆದವನೆಂಬ ಒಂದು ಅರ್ಥ. ಇನ್ನೊಂದು ಅರ್ಥದಲ್ಲಿ ಸುಖವನ್ನು ಅನುಭವಿಸುವವ ಅರ್ಥಾತ್ ಭೌತಿಕ ಸುಖವನ್ನು ಅನುಭವಿಸುವವ.ಹಾಗಾದರೆಸುಖವೆಂದರೆ, ಸುಖದ ಅರ್ಥ, ಸುಖದ ಕಲ್ಪನೆ. ವೇದಾಂತ ಹಾಗೂ ಪುರಾಣ ಸಾಹಿತ್ಯಗಳಲ್ಲಿ ವಿವಿಧ ರೀತಿಯಲ್ಲಿ ಬಣ್ಣಿಸಲಾಗಿದೆ. ಆದರೆ ಲೌಕಿಕವಾಗಿ ಸುದೈವಿಯ ಸುಖದ ಅರ್ಥವಿವರಣೆಯೇ ಬೇರೆಯಾಗಿರುತ್ತದೆ.

ಜ್ಯೋತಿಷ್ಯ ಶಾಸ್ತ್ರದ ದೃಷ್ಟಿಯಿಂದ ಸುದೈವಿ ಯಾರು ? ಸುದೈವಿ ಜಾತಕ ಹೇಗಿರುತ್ತದೆ ? ಎಂಬುದನ್ನು ಗುರುತಿಸುವ ಗುರುತರ ಜವಾಬ್ದಾರಿಯನ್ನು ನಿರ್ವಹಿಸುವ ಕಾರ್ಯವನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಇದು ಅತ್ಯಂತ ವಿನೂತನ ಪ್ರಯೋಗವಾಗಿದ್ದು, ಜ್ಯೋತಿಷ್ಯ ಶಾಸ್ತ್ರಕ್ಕೆ ಒಂದು ತುಲನಾತ್ಮಕ ದೃಕ್-ಪಥವನ್ನು ಒದಗಿಸುವಂತಹದಾಗಿದೆ. "ಕುಂಡಲಿ ಗುಣ ನಿರ್ಣಯ" ದೃಷ್ಟಿಯಿಂದ ಈ ಅಧ್ಯಾಯ ಅನಿವಾರ್ಯವಲ್ಲವಾದರೂ ಸುದೈವಿಯ ಅರ್ಥಾತ್ ಸುಖದ ಕಲ್ಪನೆಯು ಸಾಹಿತ್ಯ ಹಾಗೂ ಕಾಲ್ಪನಿಕ ದೃಷ್ಟಿಕೋನಕ್ಕೂ ಪ್ರಾಯೋಗಿಕ ಹಾಗೂ ವಾಸ್ತವಿಕ ದೃಷ್ಟಿಕೋನಕ್ಕೂ ಇರುವ ಅಂತರದ ಪರಿಜ್ಞಾನ ನಮ್ಮ ಅಧ್ಯಯನಕ್ಕೆ ಒಂದು ಹೊಸ ಆಯಾಮವನ್ನು ಒದಗಿಸುತ್ತದೆಂಬ ದೃಷ್ಟಿಯಿಂದ ಈ ಅಧ್ಯಾಯವನ್ನು ಈಗ್ರಂಥದಲ್ಲಿ ಸೇರ್ಪಡಿಸಲಾಗಿದೆ.

ಈ ಹಿಂದೆ ಹೇಳಿದಂತೆ ಸುದೈವೀ ಎಂದರೆ ದೈವಾನುಗ್ರಹವಿದ್ದವ. ಅರ್ಥಾತ್ ಸುಖವನ್ನು ಪಡೆದವ, ಅನುಭವಿಸುವವ ಎನ್ನಬಹುದು. ಹಾಗಾದರೆ ಸುಖದ ಕಲ್ಪನೆ ಹೇಗೆ ? ಸುಖದ ಅರ್ಥ ವಿವರಣೆ ಎಂತು ? ಸುಖವೆಂದರೇನು ? ಸುಖ ಗಳಿಸುವ ವಿಧಾನ ಯಾವುದು ? ರೀತಿ

ಯಾವುದು ? ಏತಕ್ಕೆ ಸುಖವೆನ್ನುತ್ತಾರೆ ? ಹಾಗಾದರೆ ಕೇಳಿ ಗೋಪಾಲ ದಾಸರು ತಮ್ಮ ದಾಸವಾಣಿಯಲ್ಲಿ ಭಗವಂತನನ್ನು ಹೀಗೆ ಪ್ರಾರ್ಥಿಸಿದ್ದಾರೆ.

ಏನು ಬೇಡಲಿ ನಿನ್ನ ಬಳಿಗೆ ಬಂದು
ನೀನಿತ್ತ ಸೌಭಾಗ್ಯ ನಿಬಿಡವಾಗಿರಲಿಕ್ಕೆ ॥

ಜನನಿಯನು ಕೊಡು ಎಂದು ಜಗದೀಶ ಬೇಡುವೆನೆ
ಜನನಿಯೇನಿತ್ತಾಳಾ ಧ್ರುವರಾಯಗೆ
ಜನಕನನು ಕೊಡು ಎಂದು ಜಯವಂತ ಬೇಡುವೆನೆ
ಜನಕನೇನಿತ್ತನಾ ಪ್ರಲ್ಹಾದಗೆ ॥೧॥

ಅನುಜನನು ಕೊಡು ಎಂದು ಅತಿಶಯದಿ ಬೇಡುವೆನೆ
ಅನುಜನೇ ನಿತ್ತನೈ ಆ ವಾಲಿಗೆ
ಧನವ ಕೊಡುಯೆಂದು ದೈನ್ಯದಲಿ ಬೇಡುವೆನೆ
ಧನವ ಗಳಿಸಿದ ಸುಯೋಧನನೇನಾದ ಕೊನೆಗೆ ॥೨॥

ಬಂಧುಗಳ ಕೊಡು ಎಂದು ಛಂದದಲಿ ಬೇಡುವೆನೆ
ಬಂಧುಗಳು ಸಲುಹಿದರೆ ಆ ಗಜರಾಯನ
ಅಂದಣವನೇರುವಾ ಭಾಗ್ಯವನು ಬೇಡುವೆನೆ
ಅಂದಣವನೇರಿದ ನಹುಷ ನೇನಾದ ಕೊನೆಗೆ ॥೩॥

ಸತಿಯಳಾ ಕೊಡುಎಂದು ಮತಿವಂತ ಬೇಡುವನೇ
ಸತಿಯಿಂದ ದಕ್ಕಿನಾವು ವಸು ಏನು ಕಂಡ
ಸುತರನ್ನು ಕೊಡು ಎಂದು ಸುಖದಿ ನಾ ಬೇಡುವನೆ
ಸುತರಿಂದ ಧೃತರಾಷ್ಟ್ರ ಗತಿ ಏನು ಕಂಡ ॥೪॥

ಬೇಡುವೆನು ನಾನೊಂದ ಬೇಡುತಕ್ಕುದದೇವ
ನೀಡೆನೆಂಬುದು ನಿನ್ನ ಮನದೊಳಿತ್ತೆ
ಮೂಡಲಾದ್ರೀಶ ಗೋಪಾಲ ವಿಠ್ಠಲರೇಯ
ಬೇಡದಂದಿ ಪಾರು ಮಾಡಯ್ಯ ದೊರೆಯೆ ॥೫॥

ಈ ಪದ್ಯದ ತಾತ್ಪರ್ಯವಿಷ್ಟೇ, ತಂದೆ, ತಾಯಿ, ಬಂಧು, ಬಳಗ, ಧನ–ಕನಕ ಮೊದಲಾದ ಯಾವುದನ್ನು ಬೇಡಿದರೂ ಅವು ನಿಷ್ಪ್ರಯೋಜಕವು; ಈ ಐಹಿಕ ಭೋಗ ಭಾಗ್ಯಗಳು ಸದ್ಗತಿಯನ್ನು ಕೊಡಲಾರವು. ಆದ್ದರಿಂದ ಇಂತಹಗಳನ್ನು ಬೇಡದಂತೆ ಮಾಡು. ಅರ್ಥಾತ್ ಮೋಕ್ಷವನ್ನು ದಯ ಪಾಲಿಸು ಎಂಬುದೇ ಈ ಪದ್ಯದ ಸಾರಾಂಶ. ಇನ್ನು ಇದೇ ಮಾತನ್ನು ಪುಷ್ಟೀಕರಿಸುವಂತೆ ಯಮಧರ್ಮನು ನಚಿಕೇತುವಿಗೆ ಹೀಗೆ ಹೇಳುತ್ತಾನೆ.

ಕಠೋಪನಿಷತ್ ಮೊದಲನೆಯ ವಲ್ಲಿಯ (ಅಧ್ಯಾಯದ) ೨೩ ನೇ ಶ್ಲೋಕದಿಂದ ೨೫ ನೇ ಶ್ಲೋಕದವರೆಗಿನ ಪದ್ಯಗಳಲ್ಲಿ ಯಮಧರ್ಮನು ನಚಿಕೇತುವಿಗೆ ಹೀಗೆ ಹೇಳಿದ್ದಾರೆ.

ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ
ಬಹೂನ್ ಪಶೂನ್ ಹಸ್ತಿ ಹಿರಣ್ಯಮಶ್ವಾನ್
ಭೂಮೇರ್ಮಹದಾಯತನಂ ವೃಣೀಷ್ವ
ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ

ನೂರು ವರ್ಷ ಬದುಕುವಂತಹ ಮಕ್ಕಳನ್ನು ಮತ್ತು ಮೊಮ್ಮಕ್ಕಳನ್ನು ಬೇಡಿಕೋ. ಬಹು ದನಗಳನ್ನು, ಆನೆ, ಕುದುರೆಗಳನ್ನು, ಚಿನ್ನವನ್ನು, ಭೂಮಿಯ ವಿಸ್ತಾರವಾದ ರಾಜ್ಯವನ್ನು ಬೇಡಿಕೋ. ನೀನು ಎಷ್ಟು ವರ್ಷ ಬದುಕಲು ಇಚ್ಛಿಸುವಿಯೋ ಅಷ್ಟು ಕಾಲ ಬದುಕು.

ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ
ಸರ್ವಾನ್ ಕಾಮಾಂಶ್ಛಂದತಃ ಪ್ರಾರ್ಥಯಸ್ವ
ಇಮಾ ರಾಮಾಃ ಸರಥಾಃ ಸತೂರ್ಯಾ
ನಹೀದೃಶಾ ಲಂಭನೀಯಾ ಮನುಷ್ಯೈಃ

ಭೂಲೋಕದಲ್ಲಿ ಯಾವ ಯಾವ ಕಾಮಗಳು ದುರ್ಲಭವೋ,ಆ ಕಾಮ ಗಳೆಲ್ಲವನ್ನೂ ಇಚ್ಛಾನುಸಾರ ಬೇಡು. ಅಪ್ಸರಸ್ತ್ರೀಯರು ರಥಗಳಿಂದಲೂ ವಾದ್ಯಗಳಿಂದಲೂ ಕೂಡಿರುತ್ತಾರೆ. ಇಂತಹವರು ಮನುಷ್ಯರಿಗೆ (ಮರ್ತ್ಯ

ಲೋಕದಲ್ಲಿ) ಲಭಿಸುವುದಿಲ್ಲ. ನಾನು ಕೊಡುವ ಇವುಗಳಿಂದ ಸೇವೆ ಮಾಡಿಕೋ. ಹೇ ನಚಿಕೇತುವೆ ಮರಣವನ್ನು ಕುರಿತು ಮಾತ್ರ ಪ್ರಶ್ನಿಸಬೇಡಾ.

ಹೀಗೆ ಯಮಧರ್ಮನು ನಚಿಕೇತುವಿನ ಮುಂದೆ ದೊಡ್ಡ ಪ್ರಲೋಭನ ಬಲೆಯನ್ನು ಒಡ್ಡುತ್ತಾನೆ. ಆದರೆ ನಚಿಕೇತುವಿಗೆ ಪ್ರಪಂಚದಲ್ಲಿ ಯಾವುದೂ ಬೇಕಾಗಿರುವುದಿಲ್ಲ; ಆತ್ಮಾನ್ವೇಷಣೆಯೊಂದೇ ಅವನ ಗುರಿಯಾಗಿರುತ್ತದೆ. ಆ ವಿಷಯ ಬೇರೆ.

ಇನ್ನು ಸಮರ್ಥ ರಾಮದಾಸರಂತೂ ತಮ್ಮ ಮನಾಚೆ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ.

ಜಗೀ ಸರ್ವಸುಖಿ ಅಸಾ ಕೋಣ ಆಹೆ  
ವಿಚಾರಿ ಮನಾ ತುಜೆ ಶೋಧೂನ ಪಹಾವೆ

ಇಡೀ ಜಗತ್ತಿನಲ್ಲಿ ಸರ್ವ ಸುಖಿಗಳೆಂಬುವವರು ಯಾರಿದ್ದಾರೆ ? ಎಂದು ಹೇಳಿದ್ದಾರೆ.

ಈ ಎಲ್ಲವೂ ವೇದಾಂತ ದೃಷ್ಟಿಯಿಂದಾಯಿತು. ಆದರೆ ಎಲ್ಲರೂ ವೇದಾಂತಿಗಳಾಗಲು ಶಕ್ಯವಿಲ್ಲ. ವೇದಾಂತ ದೃಷ್ಟಿಯಲ್ಲಿ ಜೀವನ ಮುಕ್ತಿ ಸ್ವರ್ಗಸುಖ ಅರ್ಥಾತ್ ಮೋಕ್ಷ ಸಾಧನೆ, ಭಕ್ತಿ ಮಾರ್ಗ, ಸಾಕ್ಷಾತ್ಕಾರ ಈ ಎಲ್ಲ ವಿಷಯಗಳ ಸಮಗ್ರ ವಿಶ್ಲೇಷಣೆಯನ್ನು ನಾವು ಶೀಘ್ರದಲ್ಲಿಯೇ ಬರೆದು ಪ್ರಕಟಿಸಬೇಕೆಂದಿರುವ "ಅಧ್ಯಾತ್ಮ ಜ್ಯೋತಿಷ್ಯ" ಎಂಬ ಗ್ರಂಥದಲ್ಲಿ ವಿವರ ವಿವರವಾಗಿ ವಿವರಿಸಲಾಗುವುದು. ಏಕೆಂದರೆ ಇದೊಂದೇ ವಿಷಯದ ಮೇಲೆ ನೂರಾರು ಪುಟಗಳಷ್ಟು ವಿವರಿಸುವಷ್ಟು ಈ ವಿಷಯದ ವ್ಯಾಪ್ತಿ ಇರುತ್ತದೆ. ಪ್ರಸ್ತುತ ಲೌಕಿಕ ದೃಷ್ಟಿಯಿಂದ ಸುದೈವಿ ವ್ಯಕ್ತಿ ಯಾರು ? ಸುದೈವಿ ಜಾತಕ ಹೇಗಿರುತ್ತದೆಂಬುದನ್ನು ನೋಡುವಾ.

ಏನಿದ್ದ ವ್ಯಕ್ತಿಗಳು ಸುದೈವಿಗಳಿರುತ್ತಾರೆ ಎಂಬುದರ ಬಗೆಗೆ ಸುಭಾಷಿತಕಾರರು ಹೀಗೆ ಹೇಳಿದ್ದಾರೆ,

೧) ಸೂನು ಸಚ್ಚರಿತಃ ಸತಿ ಪ್ರಿಯತಮಾ
ಸ್ವಾಮೀ ಪ್ರಸಾದೋನ್ಮುಖಿ

೨) ಸ್ನಿಗ್ಧಮಿತ್ರಮವ್ ಅವಂಚಕ ಪರಿಜನೋ
ನಿಕ್ಲೇಶ ಲೇಶಂ ಮನಃ

೩) ಆಕಾರೋರುಚಿರಃ ಸ್ಥಿರಸ್ಯ ವಿಭವೋ
ವಿದ್ಯಾವ ದಾತಂ ಮುಖಿಃ

೪) ತುಷ್ಟೇ ವಿಷ್ಟ ಪರಿಹಾರಣೇಷ್ಟದ ಹರೇ
ಸಂಪ್ರಾಪ್ಯತೇ ದೇಹಿನಾಂ

ಈ ಶ್ಲೋಕದ ತಾತ್ಪರ್ಯವಿಷ್ಟೇ.ಆ ಭಗವಂತನ ದಯವಿದ್ದರೆ ಮಾತ್ರ ಸಚ್ಚರಿತ್ರೆಯ ಮಗನೂ ತಾನು ಕೆಲಸಮಾಡುತ್ತಿರುವ ಒಡೆಯನು(ಒಳ್ಳೆಯ ಜಮಾನನ) ಸಂತುಷ್ಟ ಸಂಪ್ರೀತನೂ, ಪ್ರೀಯಳಾಗಿದ್ದ ಸತಿಯೂ, ಗಾಢವಾದ ಮಿತ್ರರೂ, ವಂಚನಾರಹಿತರಾದ ಎರಡು ಬಗೆಯವ ಒಡನಾಡಿಗಳು, (ಪರಿಜನರು) ಕ್ಲೇಶರಹಿತವಾದ ಮನಸ್ಸು, ಸದೃಢ ಹಾಗೂ ಕಾಂತಿಯುಕ್ತವಾದ ದೇಹವೂ,ಕೊರತೆ ಇಲ್ಲದ ಸಂಪತ್ತು, ವಿದ್ಯೆಯಿಂದ ತುಂಬಿದ ಮುಖವು ಈ ಎಲ್ಲವೂ ದೊರೆಯುತ್ತದೆ. ಅರ್ಥಾತ್ ಈ ಎಲ್ಲ ಸಂಗತಿಗಳು ಇದ್ದ ವ್ಯಕ್ತಿಗಳೇ ಸುದೈವಿ ಎಂದು ಭಾವಿಸಬಹುದು. ಅವರೇ ಸುಖಿಗಳು ಸುದೈವಿ ವ್ಯಕ್ತಿಗಳು ಸುದೈವಿ ಜಾತಕವೆನ್ನಬಹುದು.

ಇನ್ನು ಓರ್ವ ಆಂಗ್ಲಸಾಹಿತಿಯು ಸುಖಿಗಳ ಬಗೆಗೆ ಹೀಗೆ ಹೇಳಿದ್ದಾನೆ.

One who has Noworry, Nohurry Nocurry, He is happy ತಾತ್ಪರ್ಯವಿಷ್ಟೇ ಯಾರ ಜೀವನದಲ್ಲಿ ಗಡಿಬಿಡಿ(ಟೆನ್ಶನ್) ಇರುವುದಿಲ್ಲವೋ ಯಾರು ಚಿಂತಾರಹಿತರಿರುತ್ತಾರೋ, ಯಾರಿಗೆ ಮಸಾಲಾ ಪದಾರ್ಥಗಳು ರುಚಿಸುವುದಿಲ್ಲವೋ ಅರ್ಥಾತ್ ಕರಿದ ಮಸಾಲೆಯುಕ್ತವಾದ ಆಹಾರದಲ್ಲಿ ಆಸಕ್ತಿ ಇಲ್ಲದಿರುವದು ಅವರೇ ಸುಖಿಗಳು ಎಂದು ಅಭಿಪ್ರಾಯ ದವರಿದ್ದಾರೆ.

ಇನ್ನು ನಮ್ಮ ಸರ್ವಜ್ಞಕವಿಯು ಸುದೈವಿಗಳ ಬಗೆಗೆ ಸುಖೀವರ್ಗ ದವರ ಬಗೆಗೆ ಹೀಗೆ ಹೇಳಿದ್ದಾನೆ.

ಬೆಚ್ಚನಾ ಮನೆ ಇರಲು
ವೆಚ್ಚಕ್ಕೆ ಹೊನ್ನಿರಲು
ಇಚ್ಚೆಯನ್ನರಿತು ನಡೆವ ಸತಿ ಇರಲು
ಸ್ವರ್ಗಕ್ಕೆ ಕಿಚ್ಚುಹಚ್ಚೆಂದಾ ಸರ್ವಜ್ಞ

ಈ ಪದ್ಯದ ತಾತ್ಪರ್ಯವಿಷ್ಟೇ. ಸ್ವರ್ಗವೆಂದರೆ ರೋಗ ಇಲ್ಲದ, ಮುಪ್ಪು ಇಲ್ಲದ, ಹಣದಕೊರತೆ ಇಲ್ಲದ, ಕಳ್ಳರಕಾಟವಿಲ್ಲದ, ಯಾವುದಾದರೂ ಚಿಂತೆಇಲ್ಲದ, ಶೋಕವಿಲ್ಲದ, ಅರ್ಥಾತ್‌ಭೋಗ ವಸ್ತುಗಳಿಂದ ತುಂಬಿದ ಭೋಗಿಸುವ ಭೂಮಿಎನ್ನಬಹುದು. ಆದರೆ ಸುಸಜ್ಜಿತವಾದ ಸ್ವಗೃಹ ಹಾಗೂ ವೆಚ್ಚಕ್ಕೆ ಸಾಕಾಗುವಷ್ಟು ಹಣ ಮತ್ತು ಆಜ್ಞಾಧಾರಕ ಪತ್ನಿ ಈ ಮೂರೇ ಮೂರುಸಂಗತಿಗಳಿದ್ದರೆ ಸ್ವರ್ಗಸುಖಕ್ಕಿಂತಲು ಮಿಗಿಲು. ಎನ್ನುತ್ತಾರೆ.

ಇನ್ನು ನಮ್ಮ ಅಭಿಪ್ರಾಯದಲ್ಲಿ ಫಲಜ್ಯೋತಿಷ್ಯದ ಪ್ರಕಾರ ಸುದೈವೀ ವ್ಯಕ್ತಿ ಯಾರು ಸುದೈವಿ ಜಾತಕ ಹೇಗಿರುತ್ತದೆ ಎಂಬುದನ್ನು ನೋಡುವಾ.

ಯಾರ ಜಾತಕದಲ್ಲಿ ಈ ಏಳು ಸಂಗತಿಗಳು ಪೂರಕವಿರುವವೋ ಅವರು ಸುದೈವಿ ವ್ಯಕ್ತಿಗಳು ಸುಖಪುರುಷರು ಅರ್ಥಾತ್ ಸುದೈವಿ ಜಾತಕವಿರುವವರು. ಅದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧) ಲಗ್ನದಲ್ಲಿ (ತನು ಸ್ಥಾನದಲ್ಲಿ) ಯು ಬಲಾಢ್ಯಗ್ರಹ ಹಾಗೂ ಲಗ್ನೇಶನು ಬಲಾಢ್ಯರಿದ್ದರೆ.

೨) ಚತುರ್ಥಸ್ಥಾನದಲ್ಲಿ ಬಲಾಢ್ಯ ಗ್ರಹಗಳು ಹಾಗೂ ಚತುರ್ಥೇಶನು ಬಲಾಢ್ಯನಿದ್ದರೆ.

೩) ಸಪ್ತಮಸ್ಥಾನದಲ್ಲಿ ಬಲಾಢ್ಯ ಗ್ರಹವಿದ್ದು ಸಪ್ತಮೇಶನೂ ಬಲಾಢ್ಯ ನಿದ್ದರೆ.

೪) ಸೂರ್ಯನು ಬಲಾಢ್ಯನಿದ್ದರೆ.

೫) ಚಂದ್ರನು ಬಲಾಢ್ಯನಿದ್ದರೆ.

೬) ಈ ಗ್ರಂಥದ ನಾಲ್ಕನೇ ಅಧ್ಯಾಯದ ೩೨ನೇ ಪುಟದಿಂದ ೫೦ನೇ ಪುಟದ ವರೆಗೆ ವಿವರಿಸಿದಂತೆ ಅದರಲ್ಲಿಯೂ ೩೭ನೇ ಪುಟದಿಂದ ೪೫ನೇ ಪುಟದ ವರೆಗೆ ವಿವರಿಸಿದಂತೆ ಆಯಾಲಗ್ನಗಳ ಯೋಗಕಾರಕ ಗ್ರಹಗಳು ಬಲಾಢ್ಯರಿದ್ದರೆ

೭) ಪಾಪಗ್ರಹಗಳ ಅಶುಭಯೋಗ ವಿರದಿರುವ ಜಾತಕ.

## ೧) ಲಗ್ನ ಹಾಗೂ ಲಗ್ನೇಶನ ಮಹತ್ವ :

ಜಾತಕದ ತನುಸ್ಥಾನದಿಂದ ಅರ್ಥಾತ್ ಲಗ್ನದಿಂದ ಯಾರೊಬ್ಬರ ಸತ್ವ, ರಜ, ತಮ ಮೊದಲಾದ ಸ್ವಭಾವ, ಶರೀರ ಪ್ರಕೃತಿ ದೈಹಿಕ ಸೌಖ್ಯ, ಶೀಲ, ಮನಸ್ಸು ಸೌಂದರ್ಯ ಬಣ್ಣ, ವ್ಯಕ್ತಿಮಹತ್ವ (ಪರ್ಸನ್ಯಾಲಿಟಿ) ಮೊದಲಾದ ವಿಷಯಗಳು ತಿಳಿಯುತ್ತವೆ. ಆದುದರಿಂದ ಲಗ್ನದಲ್ಲಿ ಬಲಾಢ್ಯ ಗ್ರಹವಿದ್ದು ಲಗ್ನೇಶನು ಬಲಾಢ್ಯನಿದ್ದರೆ. ಮೇಲೆ ಬರೆದ ಸಂಗತಿಗಳು ಲಭಿಸುತ್ತವೆ. ಅಂತೆಯೇ ಲಗ್ನದಲ್ಲಿಯ ಗ್ರಹ ಹಾಗೂ ಲಗ್ನೇಶನ ಬಲಾಬಲಕ್ಕೆ ಮಹತ್ವವಿದೆ. ಈ ಮಾತನ್ನು ಸ್ಪಷ್ಟೀಕರಿಸಲು ಎರಡು ಉದಾಹರಣೆಗಳನ್ನು ಕೊಡುತ್ತೇನೆ. ಹೇಗೆ ಯಾವುದೊಂದು ಗುಡಿಯು ಭವ್ಯವಾಗಿಯೂ, ಸುಂದರವಾಗಿಯೂ ಗಟ್ಟಿಮುಟ್ಟಾಗಿಯೂ, ಆಕರ್ಷಕ ವಾಗಿಯೂ ಇದ್ದು ದೇವರೇ ಇಲ್ಲದಿದ್ದರೆ ಆ ಗುಡಿಯು ಮಹತ್ವ ಕಳೆದು ಕೊಳ್ಳುತ್ತದೆ. ಹಾಗೆ ಜಾತಕದಲ್ಲಿಯ ಎಲ್ಲ ಭಾವ (ಸ್ಥಾನ) ಹಾಗೂ ಭಾವೇಶರು ಬಲಾಢ್ಯರಿದ್ದು ಲಗ್ನೇಶ ಹಾಗೂ ಲಗ್ನದಲ್ಲಿಯ ಗ್ರಹ ದುರ್ಬಲ ರಿದ್ದರೆ ದೇವರಿಲ್ಲದ ಗುಡಿಯಂತೆ ಆಗುತ್ತದೆ. ಇನ್ನೊಂದು ಉದಾಹರಣೆ ಅಂದರೆ ಯಾವುದೊಂದು ಸಭೆ ಸಮಾರಂಭಗಳನ್ನು ನಡೆಸಿಕೊಂಡು ಹೋಗಲು ಆ ಸಭೆಯಅಧ್ಯಕ್ಷನಿಗೆ ಎಷ್ಟುಮಹತ್ವವೋ ಹಾಗೆ ಲಗ್ನೇಶನೆಂದರೆ ಸ್ಪೀಕರ ಇದ್ದಹಾಗೆ ಎಲ್ಲಕ್ಕಿಂತಲೂ ಮುಖ್ಯನೆಂದರೆ ಲಗ್ನದಲ್ಲಿಯ ಗ್ರಹ ಹಾಗೂ ಲಗ್ನೇಶ ಬಲಾಢ್ಯನಿದ್ದ ವ್ಯಕ್ತಿಯು ಸದೃಢಪ್ರಕೃತಿಯವನಿರುತ್ತಾನೆ. (General health Condition is good)

## ೨) ಚತುರ್ಥಸ್ಥಾನ ಹಾಗೂ ಚತುರ್ಥೇಶನ ಮಹತ್ವ :

ಜಾತಕದ ಚತುರ್ಥಸ್ಥಾನದಿಂದ ಅನೇಕ ಸಂಗತಿಗಳು ತಿಳಿಯುತ್ತದೆ. ವಿಶೇಷವಾಗಿ ಮಾತೃಸೌಖ್ಯ, ಸ್ಥಾವರ ಆಸ್ತಿಸೌಖ್ಯ ವಾಹನಸೌಖ್ಯ, ಸ್ಥಾವರ ಇಷ್ಟೆಟಸೌಖ್ಯ, ಕೌಟುಂಬಿಕಸೌಖ್ಯ ಪಿತ್ರಾರ್ಜಿತಸೌಖ್ಯ ಆಳು-ಹೋಳು, ಪರಿಚಾರಕರಸೌಖ್ಯ, ತೋಟ-ಪಟ್ಟಿ ಹೊಲ-ಮನೆ ಬಂಗ್ಲೆ ಮೊದಲಾದವು ಗಳಿಂದ ಸೌಖ್ಯಸಿಗುವ ಸ್ಥಾನ ವೆಂದರೆ ಚತುರ್ಥಸ್ಥಾನವು.

ಚತುರ್ಥಸ್ಥಾನಕ್ಕೆ ಸುಖಸ್ಥಾನವೆನ್ನುತ್ತಾರೆ ಚತುರ್ಥಸ್ಥಾನದ ಎರಡ-ನೇಯ ಅರ್ಥವೆಂದರೇನೆ ಸುಖಸ್ಥಾನವು. ಅಷ್ಟೇಏಕೆ ? ಐಹಿಕ, ಲೌಕಿಕಗಳಲ್ಲಿ ದೊರೆಯಬಹುದಾದ ಎಲ್ಲ ಪ್ರಕಾರದ ಸುಖಗಳಿಗೆ ಚತುರ್ಥಸ್ಥಾನವೇ ಕಾರಕವು. ಆದುದರಿಂದ ಚತುರ್ಥದಲ್ಲಿ ಬಲಾಢ್ಯ ಗ್ರಹವಿದ್ದು ಅದರಲ್ಲಿಯೂ ಗುರು, ಶುಕ್ರ ಚಂದ್ರರಂಥ ಶುಭ ಗ್ರಹಗಳು ಬಲಾಢ್ಯರಿದ್ದು ಚತುರ್ಥೇಶನು ಬಲಾಢ್ಯನಿದ್ದ ಜಾತಕನೇ ನಿಜವಾಗಿ ಸುದೈವಿ. ಸುದೈವೀ ಜಾತಕ ಸುಖಿ ಪುರುಷರೆನ್ನಬಹುದು.

ಸುಖ, ದುಃಖ, ಸಮಾಧಾನ, ಅಸಮಾಧಾನ ಈ ಎಲ್ಲ ಗುಣಗಳಿಗೆ ಮನಸ್ಸೇ ಮುಖ್ಯವಿರುತ್ತದೆ. ಮನಸ್ಸು ಗಟ್ಟಿಯಾಗಿದ್ದರೆ ದೃಢವಾಗಿದ್ದರೆ ಯಾವ ತೊಂದರೆಗಳು ಬಾಧಿಸುವಿಲ್ಲ. ಚತುರ್ಥಸ್ಥಾನವೇ ಮನಸ್ಸಿನ ಸ್ಥಾನ ವಿರುತ್ತದೆ. ಆದ್ದರಿಂದ ಚತುರ್ಥಸ್ಥಾನದಲ್ಲಿಯ ಗ್ರಹ ಹಾಗೂ ಚತುರ್ಥೇಶ ಬಲಾಢ್ಯನಿದ್ದ ಜಾತಕನಿಗೆ ತೊಂದರೆಗಳಿರುವುದಿಲ್ಲ. ಇವರು ಸುದೈವಿಗಳು ಸುಖೀವ್ಯಕ್ತಿಗಳೆನ್ನಬಹುದು. ಆದ್ದರಿಂದ ಚತುರ್ಥಸ್ಥಾನದಲ್ಲಿಯ ಗ್ರಹ ಹಾಗೂ ಚತುರ್ಥೇಶನ ಬಲಾಬಲದ ಮಹತ್ವ ಬಹಳ.

## ೩) ಸಪ್ತಮಸ್ಥಾನ ಹಾಗೂ ಸಪ್ತಮೇಶನ ಮಹತ್ವ :

ಯಾರ ವೈವಾಹಿಕ ಜೀವನ ಸುಖಕರವಿರುತ್ತದೆಯೋ ಅವರೇ ಸುಖಿ ಗಳು, ಸುದೈವಿಗಳು. ಯಾರೊಬ್ಬರ ವೈವಾಹಿಕ ಸುಖಕರ ಜೀವನಕ್ಕೆ ಸಪ್ತಮ ಸ್ಥಾನದಲ್ಲಿಯ ಗ್ರಹ ಹಾಗೂ ಸಪ್ತಮಾಧೀಶನು ಬಲಾಢ್ಯನಿದ್ದರೆ ಅವರ ವೈವಾಹಿಕ ಜೀವನ ಸುಖಕರವಿರುತ್ತದೆ. ಆದುದರಿಂದ ಸುದೈವೀ

ವ್ಯಕ್ತಿಗಳ ಸುಖೀ ಪುರುಷರ ಜಾತಕದಲ್ಲಿ ಸಪ್ತಮಸ್ಥಾನ ಹಾಗೂ ಸಪ್ತಮೇಶ ಬಲಾಢ್ಯರಿರುತ್ತಾರೆ.

## ೪) ಸೂರ್ಯನ ಮಹತ್ವ

ಸೂರ್ಯನು ಬಲಾಢ್ಯನಿದ್ದ ಜಾತಕನು ಸುಖಿಯು, ಸುದೈವಿಯೂ ಇರುತ್ತಾನೆ. ಏಕೆಂದರೆ ಸೂರ್ಯನು ಬಲಾಢ್ಯ ವ್ಯಕ್ತಿಗಳ ಸದೃಢ ಪ್ರಕೃತಿಯವರೂ, ಕಾಂತಿಯುಕ್ತರೂ, ಭವ್ಯ ವ್ಯಕ್ತಿತ್ವ ಉಳ್ಳವರೂ ಇರುವರಲ್ಲದೆ, ಇವರು ಕೈಕೊಳ್ಳಲಿರುವ ಎಂಥ ಕಠಿಣ ಕಾರ್ಯಗಳೂ ಸುಲಭವಾಗಿ ಕೈಗೂಡುತ್ತವೆ. ಅಲ್ಲದೇ ಇವರಿಗೆ ಜೀವನದ ಎಲ್ಲ ವಿಷಯಗಳಲ್ಲಿಯೂ ಸುಸಂಧಿಗಳು ತಾವಾಗಿಯೇ ಲಭಿಸುತ್ತವೆ. ಇವರು ಸ್ವತಃ ಪ್ರಭಾವಿ, ಗಣ್ಯ, ವರ್ಚಸ್ವೀವ್ಯಕ್ತಿಗಳಿರುತ್ತಾರೆ. ಇಲ್ಲವೆ ಸಮಾಜದಲ್ಲಿಯ ಗಣ್ಯ, ಪ್ರಭಾವಿ ವರ್ಚಸ್ವಿ ವ್ಯಕ್ತಿಗಳ ಸಹಾಯ ಸಹಕಾರ ಯಾವಾಗಲು ಸಿಗುತ್ತದೆ.

## ೫) ಚಂದ್ರನ ಮಹತ್ವ :

ಚಂದ್ರನು ಬಲಾಢ್ಯನಿದ್ದ ವ್ಯಕ್ತಿಗಳು ಸದಾಸುಖಿಗಳು ಹಸನ್ಮುಖಿಗಳು ಸುದೈವಿಗಳಿರುತ್ತಾರೆ. ಹೇಗೆ ಚತುರ್ಥಸ್ಥಾನವು ಸುಖಸ್ಥಾನವೋ ಹಾಗೆ, ಬಲಾಢ್ಯ ಚಂದ್ರ ಇರುವುದೆಂದರೆ ಸುಖಿಗಳು. ಸುಖ ಇದರ ಎರಡನೇ ಅರ್ಥವೇ ಬಲಾಢ್ಯಚಂದ್ರ ನಿರುವದು. ಬಲಾಢ್ಯಚಂದ್ರನಿದ್ದ ವ್ಯಕ್ತಿಗಳಿಗೆ ಮಾತೃಸೌಖ್ಯ ಸಹೋದರ-ಸಹೋದರೀಯರ ಸೌಖ್ಯ, ಮಿತ್ರವರ್ಗದವರ ಸೌಖ್ಯ, ಆಪ್ತೇಷ್ಟರ ಸೌಖ್ಯ, ನೌಕರ ಚಾಕರ ಆಳು ಹೋಳು ಪರಿಚಾರಕರ ಸೌಖ್ಯ, ವಾಹನಸೌಖ್ಯ ಐಷಆರಾಮೀ ವಿಲಾಸಮಯ ವೈಭವಶಾಲೀ ಜೀವನ. ಬೆಲೆಯುಳ್ಳ ವಸ್ತುವಡವೆ ವಸ್ತ್ರಗಳ ಕೊಳ್ಳುವ ಸಾಮರ್ಥ್ಯ ಹೀಗೆ ಜೀವನದಲ್ಲಿ ಯಾವ ವಸ್ತುಗಳ ಕೊರತೆ ಇವರಿಗೆ ಆಗುವುದಿಲ್ಲ.

## ೬) ವಿವಿಧ ಲಗ್ನಗಳ ಯೋಗಕಾರಕ ಗ್ರಹಗಳ ಮಹತ್ವ :

ಯಾರೊಬ್ಬರು ಸುಖಿಮಯ ಜೀವನ ಸಾಗಿಸಲು ಹಣದ ಪ್ರಭಾವ ಬಹಳವಿರುತ್ತವೆ. ಹಣವೇ ಸರ್ವಸ್ವವಲ್ಲವಾದರೂ ಹಣದಿಂದಲೇ ಸುಖ

ಸಿಗುತ್ತದೆ ಎಂದು ಇರದಿದ್ದರೂ, ಸದಾ ಹಣದ ಅಡಚಣೆ ಇದ್ದ ವ್ಯಕ್ತಿ ಎಂಥ ಮೇಧಾವಿಯೂ, ಕಲಾಕಾರನೂ, ಸತೋದ್ಯೋಗಿಯೂ, ವೀರನೂ, ಶೂರನೂ, ಪ್ರಾಮಾಣಿಕನೂ ಕುಶಾಗ್ರಮತಿಯೂ, ಜ್ಞಾನವಂತನು, ಬುದ್ಧಿವಂತನೂ, ಇದ್ದರೂ ದಿನ ನಿತ್ಯ ಸಂಸಾರ ಸಾಗಿಸುವ ಮಟ್ಟಿಗೆ ಹಣದ ಅನೂಕೂಲತೆ ಇರದಿದ್ದರೆ. ಮೇಲೆ ಬರೆದ ಎಲ್ಲ ಸದ್ಗುಣಗಳು ವ್ಯರ್ಥವಾಗುತ್ತದೆ. ಹೇಗೆ ಉತ್ತಮ ಚಿತ್ರವಿದ್ದರೂ ಒಂದು ಹನಿ ಮಸಿ ಎಲ್ಲವನ್ನು ನುಂಗಿ ಹಾಕುತ್ತದೆಯೋ ಹಾಗೆ ಸದಾ ಹಣದ ಅಡಚಣೆ ಇದ್ದವನ ಸ್ಥಿತಿಯಾಗುತ್ತದೆ. ಪಿತ್ರಾರ್ಜಿತ ಸೌಖ್ಯ ಆಕಸ್ಮಿಕಧನಯೋಗ ವಿದ್ದವರಂತೂ ಸುದೈವಿಗಳೇ. ಇದರಲ್ಲಿ ಎರಡು ಮಾತಿಲ್ಲ ಆ ಯೋಗವೆಲ್ಲರರಲ್ಲಿಯೂ ಇರುವುದಿಲ್ಲ. ಆಕಸ್ಮಿಕ ಧನಯೋಗಪಡೆಯುವವರ ಸಂಖ್ಯೆಯಂತೂ ಬಹಳೇ ಕಡಿಮೆ. ಆದರೆ ಇದೇ ಗ್ರಂಥದ ನಾಲ್ಕನೇ ಅಧ್ಯಾಯದ ೩೨ನೇ ಪುಟದಿಂದ ೫೦ನೇ ಪುಟದ ವರೆಗೆ ವಿವರಿಸಿದಂತೆ ಆದರಲ್ಲಿಯೂ ೩೨ನೇ ಪುಟದಿಂದ ೪೫ನೇ ಪುಟದ ವರೆಗೆ ವಿವರಿಸಿದಂತೆ ವಿಭಿನ್ನ ಲಗ್ನಗಳಿಗೆ ಇರುವ ಯೋಗಕಾರಕ ಗ್ರಹಗಳು ಬಲಾಢ್ಯವಿದ್ದರೆ ಮಾತ್ರ ಆವ್ಯಕ್ತಿ ಹಣಗಳಿಸುವ ಸಾಮರ್ಥ್ಯ ಪಡೆದಿರುತ್ತಾನೆ. ಹೀಗೆ ವಿಭಿನ್ನಲಗ್ನಗಳಿಗೆ ಸ್ವಆರ್ಜಿತವಿಷಯದ ಪೂರಕ ಯೋಗಕಾರಕಗ್ರಹಗಳು ಬಲಾಢ್ಯರಿದ್ದ ವ್ಯಕ್ತಿಗಳು ನಿಜವಾಗಿಯೂ ಸುದೈವಿ ಇಲ್ಲದಿದ್ದರೂ ಸುಖಿಗಳು ಅನ್ನಬಹುದು. ಸದೈವಿಯಾಗಲು ಯೋಗಕಾರಕ ಗ್ರಹಗಳಿಲ್ಲದೇ ಪಿತ್ರಾರ್ಜಿತ, ಹಾಗೂ ಆಕಸ್ಮಿಕಧನಯೋಗದ ಗ್ರಹಗಳು ಬಲಾಢ್ಯರಿರಬೇಕು.

## ೭) ಪಾಪಗ್ರಹಗಳ ಅಶುಭಯೋಗವಿರದಿರುವ ಜಾತಕ :

ಹಿಂದೆ ವಿವರಿಸಿದ ಆರು ಸಂಗತಿಗಳು ಪೂರಕವಿದ್ದು ಈ ಏಳನೇ ಸಂಗತಿ ದೂಷಿತವಿದ್ದ ಜಾತಕನು ಸುದೈವಿಯಾಗಲಾರ. ಹಾಗೂ ಸುಖಿಪುರುಷನಾಗಲಾರ. ಆದುದರಿಂದ ಯಾರ ಜಾತಕದಲ್ಲಿ ಪಾಪಗ್ರಹಗಳು ಲಗ್ನ, ಚತುರ್ಥ, ಸಪ್ತಮ, ದಶಮ ಈ ಕೇಂದ್ರ ಸ್ಥಾನದಲ್ಲಿರುವವ್ರೋ ಅವರು ಅಸುಖಿಗಳು, ಅವರಲ್ಲಿಯೂ ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರ ಈ ಗ್ರಹಗಳ ಪ್ರತಿಯೋಗ ಯುತಿ ಯೋಗವು ಲಗ್ನ, ಚತುರ್ಥ, ಸಪ್ತಮ ದಶಮ ಈ ಯಾವುದೊಂದು ಸ್ಥಾನದಲ್ಲಿದ್ದರೂ ಇಂಥ ಜಾತಕನು ಸುದೈವಿಯಾಗಲಾರ

ಆದರಲ್ಲಿಯು ರವಿ, ಮಂಗಳ ಶನಿ ಈ ಮೂರು ಗ್ರಹಗಳ ಯುತಿಯೋಗ ಪ್ರತಿಯೋಗ ಚತುರ್ಥ ದಶಮದಲ್ಲಿದ್ದರೂ ಅಸುಖಿಇರುತ್ತಾನೆ. ಆದರೆ ಗುರು–ಚಂದ್ರ, ಗುರು–ಶುಕ್ರ, ಶುಕ್ರ–ಚಂದ್ರ, ಬುಧ–ಶುಕ್ರ ಇವರ ಯುತಿ ಯೋಗವು ಬಲಾಢ್ಯವಾಗಿ ಲಗ್ನ, ಚತುರ್ಥ, ದಶಮ ಸಪ್ತಮದಲ್ಲಿದ್ದರೆ ಸುದೈವಿ ವ್ಯಕ್ತಿ ಸುಖಿ ಪುರುಷರಿರುತ್ತಾರೆ. ಇಲ್ಲವೆ ಗುರು ಚಂದ್ರ, ಗುರು, ಶುಕ್ರ ಶುಕ್ರ – ಚಂದ್ರ ಈ ಗ್ರಹಗಳ ತ್ರಿಕೋಣಯೋಗ, ಪ್ರತಿಯೋಗ, ಲಗ್ನ ಪಂಚಮ, ಚತುರ್ಥ, ದಶಮ, ನವಮ ಈ ಸ್ಥಾನದಲ್ಲಿದ್ದ ಜಾತಕನು ಸುದೈವಿ ವ್ಯಕ್ತಿ ಇರುತ್ತಾನೆ.

ಹೀಗೆ ಮೇಲೆ ಬರೆದ ಏಳು ಸಂಗತಿಗಳು ಪೂರಕವಿದ್ದ ಜಾತಕನು ಸುದೈವಿ ಇರುತ್ತಾನೆ.



# ೧೪

## ಅನುಭವ ಸಿದ್ಧ ನಿಯಮಗಳು

ಈ ಅಧ್ಯಾಯದಲ್ಲಿ ನನ್ನ ವೃತ್ತಿಯಲ್ಲಿ ಕಳೆದ ೩೬ ವರುಷಗಳ ಅನುಭವದಲ್ಲಿ ಸಿದ್ಧವಾದ ವೈಶಿಷ್ಟ್ಯ ಪೂರ್ವಕ ಕೆಲವು ಅನುಭವಗಳನ್ನು ಕ್ರೋಡೀಕರಿಸಿ "**ಅನುಭವಿಕ ನಿಯಮಗಳು**"ಎಂದು ರೂಪಿಸಲಾಗಿದೆ. ವೃತ್ತಿಬಾಂಧವರಿಗೆ ಈ ಅಧ್ಯಾಯ ಬಹಳ ಅಮೂಲ್ಯವಾಗಿದ್ದಂತೆಯೇ ಜ್ಯೋತಿಷ್ಯದ ಪ್ರಾಥಮಿಕ ಜ್ಞಾನವಿರುವ ಓದುಗರಿಗೂ ಪ್ರಯೋಜನಕಾಗುವುದರಲ್ಲಿ ಸಂದೇಹವಿಲ್ಲ.

೧) ಲಗ್ನದಲ್ಲಿ ಬಲಾಢ್ಯ ಗ್ರಹ ಹಾಗೂ ಲಗ್ನೇಶನು ಬಲಾಢ್ಯನಿದ್ದ ಜಾತಕನು ಸಧೃಡ ಪ್ರಕೃತಿಯವನಿರುತ್ತಾನೆ.

೨) ಸೂರ್ಯನು ಬಲಾಢ್ಯನಿದ್ದ ಜಾತಕನಿಗೆ ಪಿತೃಸೌಖ್ಯ ಸಿಗುತ್ತದೆ. ಆದರೆ ಚಂದ್ರನು ಬಲಾಢ್ಯನಿದ್ದರೆ ಮಾತೃ ಸೌಖ್ಯ ಲಭಿಸುತ್ತದೆ.

೩) ಚತುರ್ಥೇಶ, ಚಂದ್ರ, ಗುರು, ಶುಕ್ರರಲ್ಲಿ ಯಾವುದೇ ಮೂರು ಸಂಗತಿಗಳು ಪೂರಕವಿದ್ದ ಜಾತಕನಿಗೆ ಮಾತೃಸೌಖ್ಯ ಸಿಗುತ್ತದೆ.

೪) ಸಪ್ತಮ ಸ್ಥಾನದಲ್ಲಿ ಬಲಾಢ್ಯ ಗ್ರಹ ಬಲಾಢ್ಯ ಸಪ್ತಮೇಶ, ಬಲಾಢ್ಯ ಶುಕ್ರ,ಗುರು ನಾಲ್ಕು ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೂರಕವಿದ್ದ ಜಾತಕನಿಗೆ ವೈವಾಹಿಕ ಜೀವನ ಸುಖಕರವಿರುತ್ತದೆ.

೫) ಗುರು, ಬುಧ, ಪಂಚಮೇಶರು ಬಲಾಢ್ಯರಿದ್ದ ಜಾತಕನು ನಿರ್ವಿಘ್ನವಾಗಿ ಶಿಕ್ಷಣ ಪೂರ್ತಿಸುತ್ತಾನೆ.

೬) ಪಂಚಮದಲ್ಲಿ ಬಲಾಢ್ಯಗ್ರಹ ಹಾಗೂ ಬಲವಾನ್ ಪಂಚಮೇಶ ಮತ್ತು ಬಲಾಢ್ಯಗುರು ಈ ಮೂರು ಸಂಗತಿಗಳು ಪೂರಕವಿದ್ದ ಜಾತಕನಿಗೆ ಸಂತತೀಸೌಖ್ಯ ಸಿಗುತ್ತದೆ.

೭) ಪಾಪಗ್ರಹಗಳು ಚತುರ್ಥದಲ್ಲಿದ್ದರೆ ಅಸುಖಿಗಳು.

೮) ಪಾಪಗ್ರಹಗಳು ಚತುರ್ಥದಲ್ಲಿದ್ದರೆ ಮಾತೃಸೌಖ್ಯ ಸಿಗುವುದಿಲ್ಲ. ಅದರಲ್ಲಿಯೂ ಮಂಗಳನು ಚತುರ್ಥದಲ್ಲಿದ್ದರೆ ಮಾತೃಸೌಖ್ಯ ಸಿಗುವುದೇ ಇಲ್ಲಾ.

೯) ಶನಿ–ಮಂಗಳರ ಯುತಿಯೋಗ ಪ್ರತಿಯೋಗ ಲಗ್ನ–ಸಪ್ತಮ, ಚತುರ್ಥ–ದಶಮದಲ್ಲಿದ್ದ ಜಾತಕನಿಗೆ ವೈವಾಹಿಕ ಜೀವನ ಸುಖಕರ ವಿರುವುದಿಲ್ಲ.

೧೦) ದ್ವಿತೀಯದಲ್ಲಿ ಶನಿ, ಚತುರ್ಥದಲ್ಲಿ ಕುಜ ಸಪ್ತಮದಲ್ಲಿ ರಾಹು ಹೀಗೆ ಯೋಗವಿದ್ದ ಜಾತಕನಿಗೆ ವೈವಾಹಿಕ ಜೀವನ ಸುಖಕರ ವಿರುವುದಿಲ್ಲ.

೧೧) ಬಲಾಢ್ಯ ಗುರುವು ಲಗ್ನ ಪಂಚಮ, ಭಾಗ್ಯ ಈ ಯಾವುದೊಂದು ಸ್ಥಾನದಲ್ಲಿದ್ದರೆ ಚಿಕ್ಕವಯಸ್ಸಿನಲ್ಲಿ ಭಾಗ್ಯವೃದ್ಧಿಯಾಗುತ್ತದೆ.

೧೨) ನಿರ್ಬಲ ಚಂದ್ರ ಷಷ್ಠದಲ್ಲಿದ್ದರೆ ಶತ್ರುಗಳು ಬಹಳ

೧೩) ಗುರು, ಚಂದ್ರ, ಶುಕ್ರ ಬಲಾಢ್ಯರಾಗಿ ಲಾಭದಲ್ಲಿ ಇಲ್ಲವೇ ತೃತೀಯ ದಲ್ಲಿದ್ದ ಜಾತಕನು ಓಣಿಯ, ಊರಿನ, ಅನೇಕ ಜನರಿಗೆ ದಾದಾ, ಮಾಮಾ, ಕಾಕಾ ಎಂದು ಜನಪ್ರಿಯರಾಗಿರುತ್ತಾರೆ.

೧೪) ಶುಭಗ್ರಹಗಳು ಷಷ್ಠದಲ್ಲಿದ್ದರೆ ಶತ್ರುಗಳು ಬಹಳ. ಆದರೆ ಪಾಪಗ್ರಹ ಗಳು ಷಷ್ಠದಲ್ಲದ್ದರೆ ಶತ್ರುದಮನ ಮಾಡುತ್ತಾರೆ. ಶತ್ರುಗಳೇ ಇವರಿಗೆ ಅಂಜುತ್ತಾರೆ.

೧೫) ವಿಭಿನ್ನ ಲಗ್ನಗಳ ಯೋಗಕಾರಕ ಗ್ರಹಗಳು ಬಲಾಢ್ಯರಿದ್ದ ಜಾತಕನ ಹಣಗಳಿಸುವ ಸಾಮರ್ಥ್ಯ ಚನ್ನಾಗಿರುತ್ತದೆ.

೧೬) ದ್ವಿತೀಯಂ ಸ್ಥಾನದಲ್ಲಿಯ ಗ್ರಹ ಹಾಗೂ ದ್ವಿತಿಯೇಶ, ಚುತುರ್ಥ ದಲ್ಲಿಯಗ್ರಹ ಹಾಗೂ ಚತುರ್ಥೇಶ ದಶಮಸಾನ್ಥದಲ್ಲಿಯಂ ಗ್ರಹ ಹಾಗೂ ದಶಮೇಶ ಈ ಆರು ಸಂಗತಿಗಳು ಪೋಷಕವಿದ್ದ ಜಾತಕನಿಗೆ ಪಿತ್ರಾರ್ಜಿತ ಸೌಖ್ಯ ಸಿಗುತ್ತದೆ.

೧೭) ಅಷ್ಟಮಸ್ಥಾನದಲ್ಲಿಯ ಗ್ರಹ ಹಾಗೂ ಅಷ್ಟಮೇಶ ಮತ್ತು ಪಂಚಮ ಸ್ಥಾನದಲ್ಲಿಯ ಗ್ರಹ ಹಾಗೂ ಪಂಚಮೇಶರು ಬಲಾಢ್ಯರಿದ್ದ ಜಾತಕ ನಿಗೆ ಆಕಸ್ಮಿಕ ಧನ ಪ್ರಾಪ್ತಿ ಆಗುತ್ತದೆ.

೧೮) ಗುರುವು ಬಲಾಢ್ಯನಿದ್ದ ಜಾತಕನು ಪಾಂಡಿತ್ಯಪೂರ್ಣ ಲೇಖನ ಬರೆಯುತ್ತಿದ್ದರೆ ಬುಧನು ಬಲಾಢ್ಯನಿದ್ದ ಜಾತಕನು ವೈವಿಧ್ಯಮಯ ಲೇಖನ ಬರೆಯುತ್ತಾನೆ.

೧೯) ಜ್ಞಾನದ ಆಳ ಹಾಗೂ ಎತ್ತರಕ್ಕೆ ಗುರುವು ಕಾರಕನಿದ್ದರೆ ಜ್ಞಾನದ ಹರವಿಗೆ ಬುಧನು ಕಾರಕನು.

೨೦) ಶನಿ–ಮಂಗಳ, ಶನಿ–ರವಿ, ಶನಿ–ಚಂದ್ರ,ರವಿ–ಕೇತು ಚಂದ್ರ–ರಾಹು ಈ ಗ್ರಹಗಳ ಯುತಿಯೋಗ ಪ್ರತಿ ಯೋಗವು, ಲಗ್ನ ಚತುರ್ಥ ದಶಮ, ಷಷ್ಠ,ವ್ಯಯ,ಅಷ್ಟಮ ಈ ಯಾವುದೊಂದು ಸ್ಥಾನದಲ್ಲಿದ್ದ ಜಾತಕನಿಗೆ ಅಪಘಾತಗಳು ಬಹಳ.

— : ಸಮಾಪ್ತ : —

